Photo by P. K. Patel



ಬಹುಮಾನ
ಪಡೆದ ಶೀರ್ಷಿಕೆ

ತಲೆ ಹುಗಿದು ನಮಸ್ಕಾರ!

ಕಳಿಸಿದವರು :
ಎಂ. ಕೆ. ಶೆಣೈ

# ಚಂದಮಾಮ

## ಈ ಸಂಚಿಕೆಯಲ್ಲಿ



ಇವುಗಳೆಲ್ಲಾ ತುಂಬಿವೆ



# ಮಕ್ಕಳಿಗಾಗಿ–
## ಇನ್ನೊಂದು ಸುಲಭ
# ಗಿಬ್ಸ್ ಡೆಂಟಿಫ್ರಿಸ್
# ಬಣ್ಣದ ಚಿತ್ರಕಲೆಯ ಸ್ಪರ್ಧೆ
## ಆಕರ್ಷಕ ಬಹುಮಾನಗಳು!



**1ನೆಯ ಬಹುಮಾನ:**
ರಾಲೆ ಸೈಕಲ್



**2ನೆಯ ಬಹುಮಾನ:**
ಎಚ್.ಎಮ್.ವಿ.
ಗ್ರಾಮೋಫೋನ್



**3ನೆಯ ಬಹುಮಾನ:**
ವ್ಯೂ ಮಾಸ್ಟರ್
ಪ್ರೊಜೆಕ್ಟರ್ ಸೆಟ್

### ಮತ್ತು 100 ಆಕರ್ಷಕ ಪ್ರೋತ್ಸಾಹಕ ಬಹುಮಾನಗಳು!

**ಈ ಚಿತ್ರಕ್ಕೆ ಬಣ್ಣ ಕೊಡಿರಿ!** ಇದು ಬಹಳ ಸುಲಭ, ಬಹಳ ಸ್ವಾರಸ್ಯವುಳ್ಳದ್ದು! ಮತ್ತು ಎಷ್ಟೋ ಕಾಲದಿಂದ ನೀವು ಇಚ್ಛಿಸುತ್ತಿರುವ ಮೆಚ್ಚಿಕೆಯ ಒಂದು ವಸ್ತುವನ್ನು ನೀವು ಬಹುಮಾನವಾಗಿ ಪಡೆಯಬಹುದು. ವಾಟರ್ ಕಲರ್ಸ್, ಬಣ್ಣದ ಪೆನ್ಸಿಲುಗಳು, ಬಣ್ಣದ ಚಾಕ್‌ಗಳು ಅಥವಾ ನಿಮ್ಮಲ್ಲಿರುವ ಬೇರೆ ಯಾವ ಬಣ್ಣಗಳನ್ನಾದರೂ ಉಪಯೋಗಿಸಿರಿ. ಅದನ್ನು ನಿಮ್ಮಿಂದಾಗುವಷ್ಟು ಹೆಚ್ಚು ಚಂದಗೊಳಿಸಿರಿ. ಆ ಮೇಲೆ ಚಿತ್ರವನ್ನು ನಮಗೆ ಕಳುಹಿಸಿರಿ. ಅದರೊಡನೆ ಗಿಬ್ಸ್ ಡೆಂಟಿಫ್ರಿಸ್ ಬಿಲ್ಲೆಯ ಸೆಲೋಫೇನ್ ರ್‍ಯಾಪರಿನ ಮೇಲಿನ ಗಿಬ್ಸ್ ಮುದ್ರೆಯನ್ನೂ ಕಳುಹಿಸಿರಿ. ಈ ದಿನವೇ ಗಿಬ್ಸ್ ಡೆಂಟಿಫ್ರಿಸ್‌ನ ಒಂದು ಡಬ್ಬವನ್ನು ತಂದುಕೊಡುವಂತೆ ನಿಮ್ಮ ಅಮ್ಮನಿಗೆ ಹೇಳಿರಿ. ಅದನ್ನು ಪ್ರತಿದಿನವೂ ಉಪಯೋಗಿಸಿರಿ.

ಮೂರು ಮಂದಿ ನ್ಯಾಯಾಧ್ಯಕ್ಷರಿರುವ ಒಂದು ಸಮಿತಿಯು ಯಾವ ಚಿತ್ರಗಳು ಯೋಗ್ಯತೆಯ ಅನುಕ್ರಮದಲ್ಲಿ ಉತ್ತಮವಾಗಿವೆಯೆಂದು ನಿರ್ಣಯಿಸುವುದು. ಸ್ಪರ್ಧೆಯಲ್ಲಿ ಇಂದೇ ಭಾಗ ವಹಿಸಿರಿ!

**ಈ ನಿಯಮಗಳನ್ನು ನೆನಪಿಡಿರಿ:** 1 ಭಾರತದಲ್ಲಿ ವಾಸಿಸುತ್ತಿರುವ 14 ವರ್ಷಗಳವರೆಗಿನ ಪ್ರಾಯದ ಪ್ರತಿಯೊಬ್ಬ ಹುಡುಗ ಅಥವಾ ಹುಡುಗಿ ಈ ಸ್ಪರ್ಧೆಯಲ್ಲಿ ಭಾಗ ವಹಿಸಬಹುದು. 2 ನೀವು ಎಷ್ಟು ಚಿತ್ರಗಳನ್ನು ಕಳುಹಿಸಲು ಇಚ್ಛಿಸುತ್ತೀರೋ ಅಷ್ಟನ್ನು ಕಳುಹಿಸಬಹುದು, ಆದರೆ ಪ್ರತಿಯೊಂದು ಚಿತ್ರದೊಡನೆ ಗಿಬ್ಸ್ ಡೆಂಟಿಫ್ರಿಸ್ ಬಿಲ್ಲೆಯ ಸೆಲೋಫೇನ್ ರ್‍ಯಾಪರ್‌ನ ಮೇಲಿನ ಗಿಬ್ಸ್ ಮುದ್ರೆಯೊಂದನ್ನು ಕಳುಹಿಸಬೇಕು. 3 ಚಿತ್ರಗಳನ್ನು 'ಗಿಬ್ಸ್ ಡೆಂಟಿಫ್ರಿಸ್ ಕಂಟೆಸ್ಟ್, ಪೋಸ್ಟ್ ಬಾಕ್ಸ್ ನಂ. 10119, ಮುಂಬಯಿ.1' ಅವರಿಗೆ ಶನಿವಾರ ಅಗಸ್ಟ್ 30, 1958 ಅಪರಾಹ್ನ 1 ಘಂಟೆಯ ಒಳಗೆ ತಲುಪುವಂತೆ ಕಳುಹಿಸಬೇಕು. 4 ಕಳೆದುಹೋದ, ತಡವಾಗಿ ಬಂದ, ತಪ್ಪು ಸ್ಥಳದಲ್ಲಿಟ್ಟು ನಷ್ಟವಾದ ಅಥವಾ ಹಾಳಾದ ಚಿತ್ರಗಳ ವಿಷಯದಲ್ಲಿ ಕಂಪೆನಿಯು ಹೊಣೆಗಾರಿಕೆಯನ್ನು ವಹಿಸುವುದಿಲ್ಲ. 5 ಮೊದಲನೆಯ, 2ನೆಯ ಮತ್ತು 3ನೆಯ ಬಹುಮಾನಗಳನ್ನು ಗೆದ್ದವರ ಹೆಸರುಗಳನ್ನು ಈ ಪತ್ರಿಕೆಯ ನವೆಂಬರ ತಿಂಗಳ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು. ಇತರ ಬಹುಮಾನಗಳನ್ನು ಗೆದ್ದವರಿಗೆ ಅಂಚೆಯ ಮೂಲಕ ತಿಳಿಸಲಾಗುವುದು.

GD. 40A-50 KN




ಹೆಸರು..............................
..............................
ವಿಳಾಸ..............................
..............................

ಈ ಚಿತ್ರಕ್ಕೆ ಯಾರ ಸಹಾಯವೂ ಇಲ್ಲದೆ ನಾನೇ ಬಣ್ಣ ಕೊಟ್ಟಿದ್ದೇನೆ, ಮತ್ತು ನನ್ನ ಪ್ರಾಯ.... ಎಂದು ದೃಢವಾಗಿ ಹೇಳುತ್ತೇನೆ.

ಚಂದಮಾಮ

6 ಒಬ್ಬ ಸ್ಪರ್ಧೆಗಾರನಿಗೆ ಒಂದಕ್ಕಿಂತ ಹೆಚ್ಚು ಬಹುಮಾನವನ್ನು ಪಡೆಯಲು ಹಕ್ಕು ಇರುವುದಿಲ್ಲ. 7 ನ್ಯಾಯ ಸಮಿತಿಯ ನಿರ್ಣಯವೇ ಅಂತಿಮ ನಿರ್ಣಯ ಮತ್ತು ಅದಕ್ಕೆ ಎಲ್ಲರೂ ಬದ್ಧರಾಗುತ್ತಾರೆ. 8 ಈ ಸ್ಪರ್ಧೆಯ ವಿಷಯದಲ್ಲಿ ಪತ್ರವ್ಯವಹಾರ ನಡಿಸಲಾಗುವುದಿಲ್ಲ.




# ಗಿಬ್ಸ್ ಡೆಂಟಿಫ್ರಿಸ್



ಹಲ್ಲುಗಳನ್ನು ಚೆನ್ನಾಗಿ ನಿರ್ಮಲಗೊಳಿಸುತ್ತದೆ, ರುಚಿ ಒಳ್ಳೆಯದಾಗಿದೆ, ಹೆಚ್ಚು ಸಮಯ ಬರುತ್ತದೆ!

GD. 40B-50 KN ಹಿಂದುಸ್ಥಾನ್ ಲಿವರ್ ಲಿಮಿಟೆಡ್ ಅವರಿಂದ ಡಿ. ಅಂಡ್ ಡಬ್ಲ್ಯು. ಗಿಬ್ಸ್ ಲಿಮಿಟೆಡ್, ಲಂಡನ್ ಅವರಿಗಾಗಿ ಭಾರತದಲ್ಲಿ ತಯಾರಿಸಲ್ಪಟ್ಟಿದೆ.

# THE CHOICE

# Pencils

**AJANTHA**
BLACK LEAD

**EMBESEE**
BLACK LEAD

**IMPERIAL**
COPYING

**ACCOUNTANT**
COLOUR

**CHECKING**
COLOUR

**SPECTRUM**
12, COLOURS




*Manufactured by*
**THE MADRAS PENCIL FACTORY**

3, STRINGER STREET,
MADRAS.

# ಇದನ್ನು ಓದಿ ನಿಮಗೆ ಆಶ್ಚರ್ಯವಾಗಬಹುದು...




ಗಿಡಗಳೂ ನಮ್ಮಂತೆಯೆ ತಿನ್ನುತ್ತವೆ! ಮತ್ತು ಕುಡಿಯುತ್ತವೆ! ಕೆಲವು ಗಿಡಗಳು ಕ್ರಿಮಿಕೀಟಗಳನ್ನು ಕೂಡ ತಿನ್ನುತ್ತವೆ. ಈ ಚಿತ್ರದಲ್ಲಿ ಕಾಣಿಸುವುದು ದಕ್ಷಿಣ ಅಮೇರಿಕದ "ಸೌಂದರ್ಯ-ದೇವಿಯ ಮೋಸದ ಬಲೆ" ಎಂದು ಕರೆಯಲ್ಪಡುವ ಗಿಡ. ಚಿತ್ರದ 1ನೆಯ ಭಾಗದಲ್ಲಿ ನೊಣ ಬರುತ್ತದೆ; 2ನೆಯದರಲ್ಲಿ ಅದು ಎಲೆಯ ಮೇಲೆ ಕೂತುಕೊಳ್ಳುತ್ತದೆ; 3ನೆಯದರಲ್ಲಿ ಎಲೆ ನೊಣವನ್ನು ಆವರಿಸಲು ತೊಡಗುತ್ತದೆ; 4ನೆಯದರಲ್ಲಿ ನೊಣ ನುಂಗಲ್ಪಡುತ್ತದೆ.



ಈ ನೊಣಗಳನ್ನು ನೋಡಿರಿ. ಅವುಗಳಿಗೆ ರೆಕ್ಕೆಗಳಿಲ್ಲ.

ಅವು ಹಿಂದೂ ಮಹಾ ಸಾಗರದಲ್ಲಿರುವ ಕರ್ಗುಲೆನ್ ದ್ವೀಪಗಳಲ್ಲಿರುತ್ತವೆ. ರೆಕ್ಕೆಗಳಿಲ್ಲದ ಈ ನೊಣಗಳಿಗಿಂತ ರೆಕ್ಕೆಗಳಿರುವ ನೊಣಗಳು ಹೆಚ್ಚು ಬೇಗನೆ ಮತ್ತು ಹೆಚ್ಚು ದೂರ ರೋಗಗಳನ್ನು ಹರಡಿಸುತ್ತವೆ. ಕೊಳೆ ಕೂಡ ನೊಣಗಳಂತೆ ರೋಗಗಳನ್ನು ಹರಡಿಸುತ್ತದೆ.

ನೀವು ಏನೇ ಮಾಡಿರಿ, ಮೈಕೈಗಳಲ್ಲಿ ಕೊಳೆಯಾಗುವುದನ್ನು ತಪ್ಪಿಸಲು ನಿಮಗೆ ಸಾಧ್ಯವಿಲ್ಲ. ಕೊಳೆಯಲ್ಲಿ ರೋಗದ ಕ್ರಿಮಿಗಳಿವೆ. ಇವುಗಳಿಂದ ನಿಮ್ಮ ಆರೋಗ್ಯಕ್ಕೆ ಸದಾ ಅಪಾಯವಿದೆ.




**ಲೈಫ್‌ಬಾಯ್ ಸೋಪಿನಿಂದ ಈ ಕ್ರಿಮಿಗಳನ್ನು ತೊಳೆದುತೆಗೆದು ನಿಮ್ಮ ಆರೋಗ್ಯವನ್ನು ರಕ್ಷಿಸಿಕೊಳ್ಳಿರಿ. ಯಾವಾಗಲೂ ಲೈಫ್‌ಬಾಯ್ ಸೋಪಿನಿಂದ ಸ್ನಾನಮಾಡಿರಿ. ಅದು ಒಳ್ಳೆಯ ಅಭ್ಯಾಸ.**

L. 282-50 KN

ಹಿಂದೂಸ್ಥಾನ್ ಲೀವರ್ ಲಿಮಿಟೆಡ್, ಅವರಿಂದ ತಯಾರಿಸಲ್ಪಟ್ಟದ್ದು

# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

'ಮೂವರು ಮಾಂತ್ರಿಕರು' 'ಅದ್ಭುತ ದೀಪ' ಈ ಸಂಚಿಕೆಯೊಂದಿಗೆ ಮಾಯವಾಗುತ್ತವೆ. ಇವುಗಳನ್ನು ಸುಭದ್ರಪಡಿಸಿಕೊಂಡಿರುವ ನೀವು, ಮುಂದಿನ ಧಾರಾವಾಹಿಯನ್ನು ಕುತೂಹಲದಿಂದ ಕಾಯುವಿರೆಂದು ನಮಗೆ ಗೊತ್ತು. ಹೊರಡುತ್ತದೆ ಹೊಸ ಸೃಷ್ಟಿ! ಇದರಲ್ಲೇ ಹೊರಟಿದೆ ನೋಡಿ 'ಕೀಲು ಕುದುರೆ.' ಇನ್ನು ಬೇತಾಳಕಥೆಯ ವಿಕ್ರಮನ ಸಹನೆ ಹೆಚ್ಚುತ್ತಾ ಬರಲೆಂದು ಅನೇಕರು ಅಪೇಕ್ಷಿಸುತ್ತಾರೆ. ಅವನಿಗೆ ಸಹನೆ ಹೆಚ್ಚಿದಷ್ಟು ನಿಮಗೆ ಒಳ್ಳೊಳ್ಳೆ ಕಥೆಗಳು ಬರುತ್ತವಲ್ಲವೆ?

ಸಂಪುಟ ೨೧] ಜೂಲೈ ೧೯೫೮ [ಸಂಚಿಕೆ ೧



# ಮುಖಚಿತ್ರ

ಮುಂದೆ ಯುದ್ಧವೇ ಬಂದರೆ ತಮ್ಮ ಪಕ್ಷಕ್ಕೇ ಸಹಾಯ ಮಾಡಬೇಕೆಂದು ಕೇಳಲು ಪಾಂಡವರು ಅನೇಕ ರಾಜರಬಳಿಗೆ ತಮ್ಮ ದೂತರನ್ನು ಕಳುಹಿಸಿದರು. ಕೃಷ್ಣನ ಸಹಾಯವನ್ನು ಕೇಳಲಿಕ್ಕೆ ಅರ್ಜುನನೇ ಸ್ವತಃ ದ್ವಾರಕೆಗೆ ಹೊರಟ. ಅತ್ತ ದುರ್ಯೋಧನಕೂಡಾ ಯುದ್ಧಸನ್ನಾಹ ಮಾಡುತ್ತಿದ್ದ. ಕೃಷ್ಣನ ಸಹಾಯವನ್ನು ಪಡೆಯಲು ಅವನೂ ಸ್ವತಃ ದ್ವಾರಕೆಗೆ ಹೊರಟ.

ಅರ್ಜುನ-ದುರ್ಯೋಧನರಿಬ್ಬರೂ ಒಂದೇ ದಿನ ದ್ವಾರಕೆಯನ್ನು ಮುಟ್ಟಿದರು. ದುರ್ಯೋಧನನು ಸ್ವಲ್ಪ ಮುಂದಾಗೇ ಕೃಷ್ಣಮಂದಿರದೊಳಗೆ ಅಡಿಯಿಟ್ಟ. ಆಗ ಕೃಷ್ಣನು ನಿದ್ರಿಸುತ್ತಿದ್ದಕಾರಣ ದುರ್ಯೋಧನನು ಕೃಷ್ಣನ ತಲೆಬಳಿಯಲ್ಲಿ ಕುಳಿತ. ಅನಂತರ ಅರ್ಜುನನು ಒಳಕ್ಕೆ ಬಂದು, ಕೃಷ್ಣನ ಕಾಲಿನಬಳಿಯಲ್ಲಿ ನಿಂತುಕೊಂಡನು.

ಕೃಷ್ಣನು ಎಚ್ಚರಾಗುತ್ತಲೇ ಮೊದಲು ಅರ್ಜುನನನ್ನು ನೋಡಿ, ನಂತರ ದುರ್ಯೋಧನನನ್ನು ನೋಡಿದನು. ಬಳಿಕ ಅವರು ಬಂದ ಕಾರ್ಯವನ್ನು ವಿಚಾರಿಸಿದನು. ದುರ್ಯೋಧನನು ತನ್ನ ಕಾರ್ಯವನ್ನು ಹೇಳಿ, "ದೇವ, ನಾನೂ ಅರ್ಜುನನೂ ನಿನಗೆ ಒಂದೇ. ಆದರೆ ಮೊದಲು ಬಂದವನು ನಾನು. ಆದುದರಿಂದ ನೀನು ನನಗೇ ಸಹಾಯಕನಾಗಬೇಕು" ಎಂದನು.

"ನಾನು ಮೊದಲು ಅರ್ಜುನನನ್ನು ನೋಡಿದೆ. ಅಂತೆಯೇ ನಿಮುಗಿಬ್ಬರಿಗೂ ಸಮನಾಗಿಯೇ ಸಹಾಯಮಾಡುತ್ತೇನೆ. ನಾನು ಅಸ್ತ್ರ ಧರಿಸಲಾರೆ. ಆದರೆ ಅಸ್ತ್ರ ಶಸ್ತ್ರಗಳೊಂದಿಗೆ ಹೋರಾಡುವ ಹತ್ತು ಲಕ್ಷಮಂದಿ ನಾರಾಯಣರಸೇನೆ ನನಗಿದೆ. ಅವರೊಂದು ಪಕ್ಷದಲ್ಲಿಯೂ ನಾನೊಂದು ಪಕ್ಷದಲ್ಲಿಯೂ ಇರುತ್ತೇವೆ" ಎಂದ ಕೃಷ್ಣ.

ದುರ್ಯೋಧನನು ನಾರಾಯಣರನ್ನೇ ಕೋರಿಕೊಂಡನು. ಅರ್ಜುನನು ಕೃಷ್ಣನನ್ನುಮಾತ್ರ ಕೋರಿಕೊಂಡನು. ತರುವಾಯ ದುರ್ಯೋಧನನು ಬಲರಾಮನಬಳಿಗೆ ಹೋಗಿ ಸಹಾಯ ಕೇಳಿದನು. ಆದರೆ ಬಲರಾಮನು ತಾನು ಯಾವ ಪಕ್ಷವನ್ನೂ ಸೇರಲಾರೆನೆಂದುಬಿಟ್ಟ. ಕೃತವರ್ಮನು ದುರ್ಯೋಧನನಿಗೆ ಒಂದು ಅಕ್ಷೋಹಿಣಿ ಸೇನೆಯನ್ನು ಕೊಟ್ಟನು. ದುರ್ಯೋಧನನು ಹೊರಟುಹೋದಮೇಲೆ ಕೃಷ್ಣನು ಅರ್ಜುನನನ್ನು ಕುರಿತು: "ಹತ್ತು ಲಕ್ಷಮಂದಿ ನಾರಾಯಣರನ್ನು ಬಿಟ್ಟು ನಿರಸ್ತ್ರನಾದ ನನ್ನನ್ನೇಕೆ ಕೋರಿದೆ?" ಎಂದ. "ದೇವಾ, ನೀನೇ ಯುದ್ಧಮಾಡಿದರೆ ನನಗೇನು ಖ್ಯಾತಿ ಬಂದೀತು? ಯುದ್ಧದಲ್ಲಿ ನೀನು ನನಗೆ ಸಾರಥಿಯಾಗಿದ್ದರೆ ಅದೇ ಸಾಕು!" ಎಂದ ಅರ್ಜುನ. ಇದಕ್ಕೆ ಕೃಷ್ಣನು ಒಪ್ಪಿಕೊಂಡ.



# ಬಡವರಮನೆ ಹೆಣ್ಣು

ರಾಮಪುರವೆಂಬ ಗ್ರಾಮದಲ್ಲಿ ವೀರಯ್ಯನೆಂಬ ರೈತನಿದ್ದನು. ಆತನು ಬಹಳ ಮಿತವ್ಯಯ ದಿಂದ ಜೀವಿಸುತ್ತಾ ಒಂದಿಷ್ಟು ಭೂಮಿ ಕಾಣಿ ಮಾಡಿಕೊಂಡಿದ್ದನು. ಆತನಿಗೆ ರಘು ಎಂಬ ಮಗನಿದ್ದನು. ಮದುವೆ ವಯಸ್ಸಿಗೆ ಬಂದ ತರುಣ ರಘು. ವರದಕ್ಷಿಣೆ ತರುವ ಸೊಸೆ ಬರಲೆಂದು ವೀರಯ್ಯನ ಆಶಯ. ಆ ಹಣದೊಂದಿಗೆ ತನ್ನ ಹಣವನ್ನೂ ಸೇರಿಸಿ ಮತ್ತಷ್ಟು ಹೊಲವನ್ನು ಕೊಂಡುಕೊಳ್ಳುವ ಉದ್ದೇಶ ಆತನಿಗೆ. ಆದರೆ ರಘು ಮದುವೆಯ ವಿಷಯವನ್ನು ಅಲಕ್ಷಿಸಿದ್ದ.

ಅಂದು ನಗರದಲ್ಲಿ ರಥೋತ್ಸವ. ಉತ್ಸವ ನೋಡಲು ಗ್ರಾಮಸ್ಥರೆಲ್ಲ ಹೋಗುತ್ತಿದ್ದರು. ರಘು ಸಹ ತಮಾಷೆ ನೋಡಲು ಹೊರಟನು. ಅವನು ತಮ್ಮ ಜೋಳದ ಹೊಲದ ಬಳಿಗೆ ಬಂದಾಗ, ಅಲ್ಲಿ ಕಳೆ ಕೀಳುತ್ತಿದ್ದ ಲಕ್ಷ್ಮಿ ಎಂಬ ತರುಣಿ ಕಾಣಿಸಿದಳು.

ಲಕ್ಷ್ಮಿಯ ತಂದೆ ಒಂದಾನೊಂದು ಕಾಲ ದಲ್ಲಿ ಚೆನ್ನಾಗಿ ಬದುಕಿ ಬಾಳಿದ ರೈತ. ಆದರೆ ದುರದೃಷ್ಟವಶಾತ್ ಸಾಲಗಾರನಾಗಿ, ಆಸ್ತಿಯನ್ನೆಲ್ಲಾ ಕಳೆದುಕೊಂಡು ಬಡತನದಲ್ಲೇ ಸತ್ತುಹೋದನು. ಲಕ್ಷ್ಮಿ ತನ್ನ ತಾಯಿಯನ್ನು ಬಾಲ್ಯದಲ್ಲೇ ಕಳೆದುಕೊಂಡಿದ್ದಳು. ಅನಾಥಳಾದ ಲಕ್ಷ್ಮಿಯನ್ನು ಅವಳ ಅಜ್ಜಿ ಸಾಕಿ ಸಲುಹಿದಳು. ಈಗ ಆ ಅಜ್ಜಿಗೆ ಕಣ್ಣು ಕಾಣಿಸುತ್ತಿರಲಿಲ್ಲ; ಕಿವಿ ಕೇಳಿಸುತ್ತಿರಲಿಲ್ಲ. ಲಕ್ಷ್ಮಿಯ ದುಡಿತದಿಂದಲೇ ಅವರ ಜೀವನ ಸಾಗಬೇಕಿತ್ತು. ಅವರಿಬ್ಬರೂ ಒಂದು ಸಣ್ಣ ಗುಡಿಸಲಿನಲ್ಲಿ ವಾಸಿಸುತ್ತಿದ್ದರು.

ರಘು ಲಕ್ಷ್ಮಿಯನ್ನು ಕಂಡು "ಏನೇ, ಲಕ್ಷ್ಮಿ, ಎಲ್ಲರೂ ನಗರಕ್ಕೆ ಹೋಗುತ್ತಿದ್ದರೆ ನೀನಿಲ್ಲಿ ಕೆಲಸ ಮಾಡುತ್ತಿರುವೆಯಲ್ಲಾ" ಎಂದು ಕೇಳಿದನು. "ಹೋಗಲು ಪುರಸೊತ್ತು ಇದ್ದಿದ್ದರೆ ಹೋಗುತ್ತಿದ್ದೆ" ಎಂದಳು ಲಕ್ಷ್ಮಿ.

"ಕಳೆಕೀಳಲು ನಮ್ಮಪ್ಪ ಎಷ್ಟು ಕೊಡುತ್ತಾರೆ?" ಎಂದ ರಘು. "ಎರಡಾಣೆ ಕೊಡ್ತಾರೆ ಬಾಬು" ಎಂದಳು ಲಕ್ಷ್ಮಿ. "ಒಸ್, ಎರಡಾಣೇನೇ? ನಾನು ಕೊಡ್ತೇನೆ ಬಿಡು ಲಕ್ಷ್ಮಿ.

ಟಿ. ಪಿ. ನಾಭ



ಹೋಗಿ ತಮಾಷೆ ನೋಡಿಕೊಂಡು ಬಾ" ಮರುಕದಿಂದ ನುಡಿದ ರಘು.

"ನನಗೆ ಬೇಡ. ಹಣ ಸಂಪಾದಿಸುವುದೊಂದೇ ಮುಖ್ಯವಲ್ಲ. ಮಾತಿಗೆ ಬೆಲೆ ಬೇಡವೇ? ಮಾಡಿಕೊಡುವೆನೆಂದ ಕೆಲಸ ಮಾಡಬೇಡವೇ?" ಎಂದಳು ಲಕ್ಷ್ಮಿ.

ರಘು ಮರುಮಾತನಾಡದೆ ತನ್ನ ಅಂಗಿಯನ್ನು ಕಳಚಿ ಒಂದು ಕಡೆಯಿಟ್ಟು, ತಾನೂ ಸಹ ಕಳೆಕೀಳಲು ಪ್ರಾರಂಭಿಸಿದನು. ಕೆಲಸ ಬೇಗ ಮುಗಿದುಹೋಯಿತು. ಆದರೆ ಹೊಲದಲ್ಲಿ ಕೆಲಸಮಾಡುವ ಅಭ್ಯಾಸವಿಲ್ಲದ ರಘು ಬಹುಬೇಗ ಆಯಾಸಗೊಂಡನು. ಅವನ ಹಣೆಯ ಮೇಲೆ ಮೂಡಿದ ಬೆವರನ್ನು ನೋಡಿ ಲಕ್ಷ್ಮಿ ಪರಿಹಾಸ್ಯ ಮಾಡಿದಳು.



"ನೀವು ನನಗೆ ತುಂಬಾ ಸಹಾಯ ಮಾಡಿದಿರಿ. ಧನ್ಯವಾದಗಳು. ನಮ್ಮ ಮನೆಗೆ ಬನ್ನಿ, ಕೊಂಚ ಪಾನಕ ಮಾಡಿಕೊಡುತ್ತೇನೆ" ಎಂದಳು. ರಘು ಲಕ್ಷ್ಮಿಯ ಸಂಗಡ ಅವಳ ಗುಡಿಸಲಿಗೆ ಹೋದನು. ಬಡವರ ಮನೆಯಾದರೂ ಅಲ್ಲಿನ ವ್ಯವಸ್ಥೆ ತುಂಬಾ ಅಚ್ಚುಕಟ್ಟಾಗಿತ್ತು. ಲಕ್ಷ್ಮಿಯ ಇಳಿವಯಸ್ಸಿನ ಅಜ್ಜಿ ಗೊಣಗುಟ್ಟುವ ಸ್ವಾಭಾವದವಳು. "ಪಾಪ, ಈ ಮುದುಕಿಯೊಂದಿಗೆ ಲಕ್ಷ್ಮಿ ಹೇಗೆ ದಿನ ಕಳೆಯುತ್ತಿದ್ದಾಳೋ ಏನೋ. ಲಕ್ಷ್ಮಿ ತುಂಬಾ ಸಹನ ಶೀಲೆಯಿರಬೇಕು" ಎಂದುಕೊಂಡ ರಘು.

ಲಕ್ಷ್ಮಿ ಪಾನಕ ತಂದು ಕೊಟ್ಟಳು. ಪಾನಕವನ್ನು ಕುಡಿದು, ನೆಟ್ಟಗೆ ರಘು ಮನೆಗೆ ನಡೆದನು. ಅಲ್ಲಿ ವೀರಯ್ಯ ದನದ ಕೊಟ್ಟಿಗೆಯನ್ನು ದುರಸ್ತು ಮಾಡುತ್ತಿರುವುದು ಕಾಣಿಸಿತು.

ಆತನು ಮಗನನ್ನು ನೋಡಿ "ರಘು, ನನಗಿಷ್ಟು ಸಹಾಯ ಮಾಡೋ. ಉತ್ಸವ ನೋಡಲು ಎಲ್ಲರೂ ನಗರಕ್ಕೆ ಹೋಗಿದ್ದಾರೆ. ಕೊಟ್ಟಿಗೆ ರಿಪೇರಿಮಾಡಲು ಒಬ್ಬರೂ ಸಿಕ್ಕಲಿಲ್ಲ. ನಾನೇ ಕೈಹಾಕಬೇಕಾಯಿತು" ಎಂದ.

ರಘು ತಂದೆಗೆ ನೆರವು ನೀಡುತ್ತಿದ್ದ. ಮಗನು ಅನ್ಯಮನಸ್ಕನಾಗಿರುವುದನ್ನು ಗಮನಿಸಿದ ವೀರಯ್ಯ "ಏನೋ ತುಂಬಾ ಆಲೋಚಿಸುತ್ತಿರುವಂತಿದೆಯಲ್ಲಾ" ಎಂದು ಕೇಳಿದ.

"ಏನಿಲ್ಲ ಅಪ್ಪಾ. ಮದುವೆಯಾಗುವಂತೆ ನೀನೂ, ಅಮ್ಮಾ ಬಲವಂತ ಪಡಿಸುತ್ತಿದ್ದಿರಿ.



ಆದರೆ ಸರಿಯಾದ ಹುಡುಗಿ ಸಿಗಲಿಲ್ಲವೆಂದು ನಾನು ಸುಮ್ಮನಿದ್ದೆ. ಈಗ ನನಗೆ ನೆಚ್ಚುವ ಹುಡುಗಿಯೊಬ್ಬಳನ್ನು ಕಂಡೆ" ಎಂದ ರಘು.

"ಯಾರು ಆ ಹುಡುಗಿ?" ಎಂದು ತಂದೆ ಕೇಳಿದ ಚಕಿತನಾಗಿ.

"ಲಕ್ಷ್ಮಿ" ಎಂದ ರಘು ಗಂಭೀರವಾಗಿ.

"ನಮ್ಮ ಮನೆಗೆ ಆಗಾಗ್ಗೆ ಕೆಲಸಮಾಡಲು ಬರುತ್ತಾಳಲ್ಲಾ ಆ ಹುಡುಗಿಯೇ?" ಕೇಳಿದ ವೀರಯ್ಯ. "ಊಂ, ಹೌದು, ಅವಳೇ ನನಗೆ ಸರಿಯಾದ ಹುಡುಗಿ" ಎಂದ ರಘು.

ವೀರಯ್ಯ ಕೊಂಚ ಯೋಚಿಸಿ "ಒಮ್ಮೆ ಅವರೂ ಸಹ ಸ್ಥಿತಿವಂತರಾಗಿದ್ದರು. ಲಕ್ಷ್ಮಿ ಸಹ ಬುದ್ಧಿವಂತಳಾದ ಹುಡುಗಿ. ಆದರೆ ಅವರ ಈಗಿನ ಆರ್ಥಿಕಸ್ಥಿತಿ ಹದಗೆಟ್ಟಿರುವುದಲ್ಲಾ" ಅನುಮಾನ ಸೂಚಿಸಿದ ವೀರಯ್ಯ.

"ಅವರ ಹಣದಿಂದ ನಮಗೇನಾಗಬೇಕು ಅಪ್ಪಾ. ಅವಳು ಜಾಣೆ; ಬುದ್ಧಿವಂತೆ, ಚೆಲುವೆ, ಅಷ್ಟು ಸಾಲದೆ" ಎಂದ ರಘು.

"ನಿಜ. ನನ್ನನ್ನು ಕೇಳಿದರೆ ಅಗತ್ಯವಾಗಿ ಅವಳನ್ನು ಮದುವೆಮಾಡಿಕೊಳ್ಳುವಂತೆ ಹೇಳುತ್ತೇನೆ. ಆದರೆ ನಿಮ್ಮ ತಾಯಿಯ ಅಭಿಪ್ರಾಯ ವೇನೊ? ಅವಳು ಕಡುಲೋಭಿ ಕಣೊ! ಹಾಲು, ಮೊಸರು, ತುಪ್ಪ ಮುಂತಾದುವುಗಳನ್ನು ಮಾರಿದ ಹಣ ವನ್ನ ಕಣ್ಣಿಗೂ ಬೀಳಿಸುವುದಿಲ್ಲ. ಎಲ್ಲಾ ಎಲ್ಲೋ ಭದ್ರಪಡಿಸುತ್ತಾಳೆ. ನಿಮ್ಮಮ್ಮ ಈ ಸಂಬಂಧಕ್ಕೆ ಖಂಡಿತ ಒಪ್ಪಲಾರಳು" ಎಂದ ವೀರಯ್ಯ.



ಅಂದೇ ರಘು ತಾಯಿಯೊಂದಿಗೆ ತನ್ನ ವಿವಾಹದ ಪ್ರಸ್ತಾಪಮಾಡಿದ. ಆಕೆ ಎಲ್ಲವನ್ನೂ ಕೇಳಿದನಂತರ "ನೀನು ಇಷ್ಟಪಟ್ಟು ಲಕ್ಷ್ಮಿಯನ್ನು ಮದುವೆಯಾಗುವೆನೆಂದರೆ ಬೇಡವೆಂದು ಹೇಳುವೆನೇ, ಮಗು. ಆದರೆ ನಿಮ್ಮಪ್ಪನ ಜಿಪುಣತನವನ್ನು ನೀನು ಅರಿಯೆಯಾ? ನೀನು ವರದಕ್ಷಿಣೆಯಿಲ್ಲದೆ ಬಡವರ ಹುಡುಗಿಯನ್ನು ಮದುವೆಯಾಗುವೆನೆಂದರೆ ಅವರು ಸ್ವಲ್ಪವೂ ಒಪ್ಪಲಾರರು," ಎಂದಳು.

ಆ ರಾತ್ರಿ ವೀರಯ್ಯ, ಆತನ ಹೆಂಡತಿ ತಮ್ಮ ಮಗನ ವಿವಾಹದ ವಿಷಯವನ್ನು ಕುರಿತು ಯೋಚಿಸಿದರು. ವೀರಯ್ಯನ ಹೆಂಡತಿಗೆ ದುರ್ಗ ಎಂಬ ಸೋದರಸೊಸೆಯೊಬ್ಬಳಿದ್ದಳು. ಅವಳನ್ನು ರಘುವಿಗೆ ಕೊಟ್ಟು ವಿವಾಹ

ಮಾಡಬೇಕೆಂದು ಹಿಂದೊಮ್ಮೆ ಹಿರಿಯರು ಮಾತನಾಡಿಕೊಂಡಿದ್ದರು. ದುರ್ಗಳಿಗೆ ಐದಾರು ನೂರು ರೂಪಾಯಿ ಬೆಲೆಬಾಳುವ ಆಸ್ತಿಯಿತ್ತು. ಈಗ ಆ ಹುಡುಗಿ ಪಟ್ಟಣದಲ್ಲಿದ್ದಳು. ಅವಳನ್ನು ಕರೆತಂದು ಒಂದು ತಿಂಗಳು ಮನೆಯಲ್ಲಿಟ್ಟುಕೊಂಡರೆ ರಘುವಿನ ಮನಸ್ಸು ಲಕ್ಷ್ಮಿಯಿಂದ ದುರ್ಗಳಕಡೆಗೆ ಹೊರಳುವುದೆಂದು ಆ ದಂಪತಿಗಳು ಯೋಚಿಸಿದರು.

ವೀರಯ್ಯ ಯಾವುದೋ ನೆಪಹೂಡಿ ಗಾಡಿ ಮಾಡಿಕೊಂಡು ಪಟ್ಟಣಕ್ಕೆ ಹೋಗಿ, ದುರ್ಗಳನ್ನು ಮನೆಗೆ ಕರೆದುಕೊಂಡು ಬಂದನು. ದುರ್ಗಳಿಗೆ ಅಂದಕ್ಕಿಂತಲೂ ಆಡಂಬರ ಹೆಚ್ಚು. ಬುದ್ಧಿಗಿಂತಲೂ ಅಹಂಕಾರ ಬಹಳ. ತಾನೊಬ್ಬ ಲಕ್ಷಾಧಿಕಾರಿಣಿಯಂತೆ ವರ್ತಿಸುತ್ತಿದ್ದಳು. ಬಲು ಸೋಮಾರಿ. ಕುಳಿತಿದ್ದ ಸ್ಥಳದಲ್ಲೇ ಕಸಸೇರಿಸುವಳು! ತನ್ನ ಸ್ವಂತ ಕೆಲಸಗಳನ್ನೂ ಸಹ ಬೇರೊಬ್ಬರು ಮಾಡಿಕೊಡಬೇಕು. ಈ ಹಳ್ಳಿಗಾಡಿನಲ್ಲಿರುವುದು ಬೇಸರವೆಂದು ಗೊಣಗುಟ್ಟುತ್ತಿದ್ದಳು. ಸದಾ ಹರಟೆಕೊಚ್ಚುತ್ತಾ ಇತರರುಕೂಡ ತಮ್ಮ ಕೆಲಸ ಮಾಡದಂತೆ ಅಡಚಣೆ ಮಾಡುವಳು.

ರಘುವನ್ನು ಕುರಿತು ಅವನ ತಾಯಿ "ಅಪ್ಪಾ, ಮಗೂ, ದುರ್ಗ ಪಟ್ಟಣದಲ್ಲಿ ಬೆಳದಾಕೆ. ಅಲ್ಲಿನ ಕೆಲವಾರು ಚಟಗಳನ್ನು ಕಲಿತಿದ್ದಾಳೆ. ಅವಳ ಮನಸ್ಸು ತುಂಬಾ ಸರಳ. ಅವಳು ನಿನ್ನನ್ನು ಮದುವೆಯಾದರೆ ನಮಗೆ ಐನೂರು ರೂಪಾಯಿ ಆಸ್ತಿ ಬರುತ್ತದೆ. ಈ ಸಂಬಂಧವಾದರೆ ನಿಮ್ಮಪ್ಪನಿಗೆ ತುಂಬಾ



ಸಂತೋಷವಾದೀತು. ಆದುದರಿಂದ ನೀನು ಅವಳೊಂದಿಗೆ ಸಹನೆಯಿಂದ ವರ್ತಿಸುತ್ತಿರಬೇಕು" ಎಂದಳು.

"ಸರಿಯಮ್ಮಾ" ಎಂದ ರಘು.

ಮನೆಯಲ್ಲಿ ದುರ್ಗಳ ಕಾಟವನ್ನು ತಡೆಯಲಾರದೆ ಇಬ್ಬರು ನೌಕರರು ಕೆಲಸಕ್ಕೆ ರಾಜೀನಾಮೆ ಕೊಟ್ಟರು. ಹಸುವಿಗೆ ಕಾಯಿಲೆ ಬಂದಿತು. ಅದನ್ನು ನೋಡಿಕೊಳ್ಳಲು ನೌಕರರಿರಲಿಲ್ಲ. ಆದುದರಿಂದ ವೀರಯ್ಯ ಮಗನೊಂದಿಗೆ "ಲೋ, ರಘು, ನೀನು ತುಸ ಹಸುವಿನಕಡೆ ಗಮನವಿಟ್ಟಿರೋ" ಎಂದನು.

"ನಾನು ಈಗ ನಗರಕ್ಕೆ ಹೋಗುತ್ತಿದ್ದೇನೆ ಅಪ್ಪಾ. ದುರ್ಗಳಿಗೆ ಯಾವುದೋ ಸಾಮಾನು ಬೇಕಂತೆ" ಎಂದ ರಘು. ವೀರಯ್ಯನ ಹೆಂಡತಿಗೆ ಏನು ಮಾಡಬೇಕೋ ತಿಳಿಯದಾಯಿತು. ತನಗೆ ಸಹಾಯಮಾಡಲು ಬರುವಂತೆ ಲಕ್ಷ್ಮಿಗೆ ಹೇಳಿ ಕಳುಹಿಸಿದಳು. ತನ್ನ ಅಜ್ಜಿಗೆ ಮೈಹುಷಾರಿಲ್ಲವೆಂದೂ, ಬರಲು ಸಾಧ್ಯವಿಲ್ಲವೆಂದೂ ಲಕ್ಷ್ಮಿ ಹೇಳಿಬಿಟ್ಟಳು.

ನಗರಕ್ಕೆ ಹೋದ ರಘು ಹತ್ತು ರೂಪಾಯಿ ಖರ್ಚುಮಾಡಿ ದುರ್ಗಳು ಕೇಳಿದ ಸಾಮಾನುಗಳನ್ನು ತಂದುಕೊಟ್ಟನು.

ಅಂದು ರಾತ್ರಿ ವೀರಯ್ಯ ಮತ್ತು ಆತನ ಹೆಂಡತಿ ಸಂಸಾರತಾಪತ್ರಯಗಳನ್ನು ಕುರಿತು ಮಾತನಾಡಿಕೊಂಡರು.

"ಈ ದುರ್ಗ ಬಂದಾಗಲಿಂದ ಎಲ್ಲಾ ತಾರುಮಾರಾಗಿದೆ. ಮೈಗಳ್ಳಿ. ಹಾಂ. ನನ್ನನ್ನು ತನ್ನ ಕೆಲಸದವಳೆಂದೇ ನೋಡುತ್ತಾ



ಳಲ್ಲಾ ಈ ಚೋಟುದ್ದದ ಪೋರಿ. ಎಷ್ಟು ಸಾಮಾನುಗಳನ್ನು ಒಡೆದು ಹಾಕಿದಳೋ, ಎಷ್ಟು ವಸ್ತುಗಳನ್ನು ಹಾಳುಮಾಡಿದಳೋ ಆ ದೇವರಿಗೇ ಗೊತ್ತಾಗಬೇಕು. ನಿಕ್ಷೇಪ ದಂತಿದ್ದ ಮನೆ ನರಕವಾಗಿದೆ. ಅಬ್ಬಾ, ನನ್ನ ತಲೆ ಚಿಟ್ಟುಹಿಡಿದುಹೋಗಿದೆ'' ಎಂದಳು ಆಕೆ.

"ಅಷ್ಟೇಯೇ? ನಮ್ಮ ರಘು ಅವಳ ಗುಲಾಮನಾಗಿಬಿಟ್ಟಿದ್ದಾನೆ. ಅವಳು ಆಸ್ತಿ ತರುವುದಂತಿರಲಿ, ಅದಕ್ಕೆ ಹತ್ತರಷ್ಟು ಅವಳು ಅವನಿಂದ ಖರ್ಚುಮಾಡಿಸುತ್ತಾಳೆ, ನೋಡು ತ್ತಿರು'' ಎಂದ ಆತ.

ಆ ದಂಪತಿಗಳು ಮತ್ತೆ ದುರ್ಗಳನ್ನು ಪಟ್ಟಣಕ್ಕೆ ಕಳುಹಿಸಿಬಿಡಲು ನಿರ್ಧರಿಸಿದರು. ಮಾರನೇಯ ದಿನವೇ ವೀರಯ್ಯ ಯಾವುದೋ ಕೆಲಸದ ನೆಪಹೂಡಿ ದುರ್ಗಳನ್ನು ತನ್ನೊಂ ದಿಗೆ ಕರೆದುಕೊಂಡು ಹೋದನು.

ಅಂದೇ ವೀರಯ್ಯನ ಹೆಂಡತಿ ಲಕ್ಷ್ಮಿಯ ಗುಡಿಸಲಿಗೆ ಹೋಗಿ "ಲಕ್ಷ್ಮೀ, ನಿನ್ನ ಅಜ್ಜಿಗೆ ಮೈಸ್ವಸ್ಥವಿಲ್ಲ. ಈ ದುಸ್ಥಿತಿಯಲ್ಲಿ ನಮ್ಮ ಮನೆಗೆ ಕೆಲಸಮಾಡಲು ಬರುವಂತೆ ನಿನಗೆ ಹೇಳುವುದು ಚೆನ್ನಲ್ಲ. ನೀವಿಬ್ಬರೂ ನಮ್ಮ ಮನೆಗೆ ಬಂದು ಅಲ್ಲೇ ಇದ್ದುಬಿಡಿ. ನನಗೆ ಸಹಾಯಕಳಿಲ್ಲದೆ ಆಗುವಂತಿಲ್ಲ. ನಿನ್ನ ಅಜ್ಜಿಗೆ ಬೇಕಾದ ಉಪಚಾರ ನಾನು ಮಾಡುತ್ತೇನೆ'' ಎಂದಳು. ಲಕ್ಷ್ಮಿ ಅಜ್ಜಿಯೊಂದಿಗೆ ವೀರಯ್ಯನ ಮನೆಗೆ ಬಂದುಬಿಟ್ಟಳು. ಅವಳು ಆ ಮನೆ ಯಲ್ಲಿ ಕಾಲಿಟ್ಟಕೂಡಲೇ ಮತ್ತೆ ಮನೆ ಮೊದಲಿ ನಂತಾಯಿತು. ಮನೆಯನ್ನು ಒಪ್ಪವಾಗಿಡು ವುದರಲ್ಲಿ ಲಕ್ಷ್ಮಿ ತುಂಬಾ ನುರಿತವಳು.

ಕೊಂಚಕಾಲ ಕಳೆಯಿತು. ಒಂದು ದಿನ ವೀರಯ್ಯ ಮಗನನ್ನು "ಮಗೂ, ಹಿಂದೊಂದು ಸಲ ಲಕ್ಷ್ಮಿಯನ್ನು ಮದುವೆಯಾಗಲು ಬಯ ಸಿದ್ದೆ. ಈಗಲೂ ಅವಳನ್ನು ಮದುವೆಯಾಗುವ ಇಚ್ಛೆಯಿದೆಯೆ?'' ಎಂದು ಕೇಳಿದ.

"ನನಗೆ ಅವಳನ್ನು ಮದುವೆಯಾಗುವ ಬಯಕೆ ಈಗಲೂ ಇದೆ. ಈ ನಡುವೆ ಅಡ್ಡ ತಂದೊಡ್ಡಿದವರು ನೀವೇ'' ಎಂದ ರಘು ಅಸಮಾಧಾನದಿಂದ. ನಂತರ ಲಕ್ಷ್ಮಿ ಮತ್ತು ರಘು ಇವರ ಮದುವೆಯಾಯಿತು. ಆ ಸಂಸಾರ ದಲ್ಲಿ ಸುಖಶಾಂತಿಗಳು ನೆಲೆಸಿದುವು.






## 18

[ಪಿಂಗಳನು ಅವಂತಿ ನಗರವನ್ನು ಸೇರಿಕೊಂಡ ನಂತರ ತನ್ನ ತಾಯಿಯಿಂದ ಅಣ್ಣಂದಿರ ಸಂಗತಿ ತಿಳಿದನು. ಕೂಡಲೇ ಭಲ್ಲೂಕಕೇತನನ್ನು ಕಳುಹಿಸಿ, ರಾಜನ ಬೊಕ್ಕಸದಲ್ಲಿದ್ದ ಹಣದ ಚೀಲಗಳೊಂದಿಗೆ ಸಹೋದರರನ್ನೂ ಮನೆಗೆ ತರಿಸಿಕೊಂಡನು. ತರುವಾಯ ಅವನ ಆಜ್ಞೆಯಂತೆ ಭಲ್ಲೂಕಕೇತನು ಅಪೂರ್ವ ಭವನವನ್ನು ಕಟ್ಟಲು ಸಿದ್ಧನಾದನು. ನಂತರ]

ಭಲ್ಲೂಕಕೇತನು ತನ್ನ ಸಂಗಡಿಗರೊಂದಿಗೆ ಕತ್ತಲಾದ ಕೂಡಲೇ ಅವಂತಿ ನಗರಕ್ಕೆ ಬಂದನು. ನದಿತೀರದಲ್ಲಿ ಭವನ ನಿರ್ಮಾಣ ಕಾರ್ಯ ಪ್ರಾರಂಭವಾಯಿತು. ಸಾವಿರಾರು ಪಿಶಾಚಿ ಶಿಲ್ಪಿಗಳು, ಕೂಲಿಗಳು, ಸೇರಿಕೊಂಡು ಒಂದು ಅಪೂರ್ವ ಭವನವನ್ನು ನಿರ್ಮಿಸ ಲಾರಂಭಿಸಿದರು.

ನದಿಯತೀರದಲ್ಲಾಗುತ್ತಿದ್ದ ಕೋಲಾಹಲ ವನ್ನು ಅವಂತಿ ನಗರದ ಕಾವಲುಗಾರರು ಕೇಳಿ ಅಲ್ಲಿಗೆ ಬಂದರು. ಹಾಗೆ ನೋಡಲು ಬಂದವರಲ್ಲಿ ಅನೇಕರನ್ನು ಭಲ್ಲೂಕಕೇತನ ಅನುಚರರು ಸೆರೆಹಿಡಿದು ಅವರಿಂದ ಕೂಲಿ ಕೆಲಸಮಾಡಿಸಿದರು. ಕತ್ತಿ, ಕಠಾರಿಗಳೊಂದಿಗೆ ಬಂದು ಮೇಲೆಬಿದ್ದ ರಾಜಭಟರನ್ನು ಹೊಡೆದು ಬಡಿದು ಓಡಿಸಿಬಿಟ್ಟರು.

ಸೂರ್ಯೋದಯದ ಹೊತ್ತಿಗೆ ಭವನವು ಸಿದ್ಧವಾಯಿತು. ಪಿಂಗಳನು ತನ್ನ ತಾಯಿ ಮತ್ತು ಸಹೋದರರೊಂದಿಗೆ ಭವನವನ್ನು ಪ್ರವೇಶಿಸಿದನು. ಬಾಲಭಾಸ್ಕರನ ಎಳೆಕಿರಣ ಗಳ ಕಾಂತಿಯಲ್ಲಿ ಆ ಭವನವು ಚಿನ್ನದ ಮುಲಾಮು ಮಾಡಿದಂತೆ ಥಳಥಳಿಸುತಿತ್ತು. ಭಲ್ಲೂಕಕೇತನ ಅನುಚರರಲ್ಲಿ ಸುಮಾರು




ಐವತ್ತು ಜನರನ್ನು ಮಾತ್ರ ತನ್ನ ಬಳಿಯಲ್ಲಿಟ್ಟುಕೊಂಡು ಉಳಿದವರನ್ನು ಪಿಂಗಳನು ಭಲ್ಲೂಕಪರ್ವತಕ್ಕೆ ಕಳುಹಿಸಿಬಿಟ್ಟನು. ಭಲ್ಲೂಕಕೇತನು ಭವನದ ಮಹಾದ್ವಾರವನ್ನು ಅಗಲವಾಗಿ ತೆರೆದು, ಬಾಗಿಲ ಬಳಿ ಒಂದು ಭಾರಿ ಶಿಲಾಕುರ್ಚಿಯಲ್ಲಿ ಕುಳಿತುಕೊಂಡು ಭವನವನ್ನು ಕಾಯುತ್ತಿದ್ದನು.

ಆ ವೇಳೆಗೆ ಅರಮನೆಯಲ್ಲಿ ಕೋಲಾಹಲವುಂಟಾಯಿತು. ರಾತ್ರಿ ಭಲ್ಲೂಕಕೇತನ ಅನುಚರರು ಕಟ್ಟುತ್ತಿದ್ದ ಭವನವನ್ನು ನೋಡಲು ಹೋಗಿ, ಅವರಿಂದ ಪೆಟ್ಟುತಿಂದ ಭಟರನಾಯಕನು ಮಂತ್ರಿಯೊಂದಿಗೆ ತಮಗಾದ ಅವಸ್ಥೆಯನ್ನು ತಿಳಿಸಿದನು. ಆ ಭವನ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದ ಶಿಲ್ಪಿಗಳೂ, ಕೂಲಿಗಳೂ ಭಯಂಕರ ಪಿಶಾಚಿಗಳೆಂದು ಅವರು ಹೇಳಿದುದನ್ನು ಮಂತ್ರಿ ನಂಬಲಿಲ್ಲ.

"ನಿನ್ನ ಮಾತನ್ನು ನಂಬುವುದಾದರೂ ಹೇಗೆ? ನೀನು ಕುಡಿದ ಅಮಲಿನಲ್ಲಿ ಕನಸು ಕಂಡಿರಬೇಕು. ಈಗ ಮನೆಗೆ ಹೋಗಿ ಮಲಗಿಕೋ. ಮಹಾಪ್ರಭುಗಳಿಗೆ ಈ ವಿಷಯ ತಿಳಿದರೆ ನಿನಗೆ ಸೆರೆಮನೆವಾಸ ಖಂಡಿತ." ಎಂದು ಮಂತ್ರಿ ಎಚ್ಚರಿಕೆ ಕೊಟ್ಟನು.

"ಇಲ್ಲ, ಪ್ರಧಾನಿಗಳೇ, ನಮ್ಮ ಭಟರಲ್ಲಿ ಹಲವರು ಅವರ ಖೈದಿಗಳಾಗಿರುವರು. ಆ ಪಿಶಾಚಿಗಳಿಂದ ಏಟು ತಿಂದು ಓಡಿ ಬಂದವನು ನಾನೊಬ್ಬನೇ ಅಲ್ಲ, ಇನ್ನೂ ಕೆಲವರಿದ್ದಾರೆ. ನನ್ನ ಮಾತಿನಲ್ಲಿ ನಂಬಿಕೆಯಿಲ್ಲದಿದ್ದರೆ ಈಗಲೇ ಕೋಟೆಬುರುಜು ಹತ್ತಿ ನೋಡಿ, ನದೀತೀರದಲ್ಲಿರುವ ಆ ಭವನ ಕಾಣಿಸುವುದು." ಎಂದ ಭಟರ ನಾಯಕ.

ಬತ್ತೇರಿಯಿಂದ ನೋಡಲು ಅರಮನೆಗೆದುರಾಗಿ ನದೀತೀರದಲ್ಲಿ ಸೂರ್ಯಕಾಂತಿಯಲ್ಲಿ ಬೆಳಗುತ್ತಿರುವ ಭವ್ಯಭವನ ಕಾಣಿಸಿತು. ಮಂತ್ರಿ ಆಶ್ಚರ್ಯಚಕಿತನಾದನು.

"ಏನಿದು ಆಶ್ಚರ್ಯ" ಎಂಬ ಮಾತುಗಳು ಅವನ ಬಾಯಿಂದ ಹೊರಟವು. ಬುರುಜಿನಿಂದ ಕೆಳಗಿಳಿಯುವಷ್ಟರಲ್ಲಿ ಕೋಶಾಧಿಕಾರಿ ದುಃಖದಿಂದ ಕಣ್ಣೀರು ಸುರಿಸುತ್ತಾ ಅಲ್ಲಿಗೆ ಬಂದು "ಪ್ರಧಾನಿಗಳೇ, ಬೊಕ್ಕಸವನ್ನು ಯಾರೋ ದುರ್ಮಾರ್ಗರು ಕೊಳ್ಳೆಹೊಡೆದಿದ್ದಾರೆ." ಎಂದನು.







"ಹಾಂ, ಭಂಡಾರವನ್ನು ಕೊಳ್ಳೆಮಾಡಿದರೇ? ಕಾವಲುಗಾರರು ಏನಾದರು? ಅವರನ್ನು ಕೂಡಲೇ ಇಲ್ಲಿಗೆ ಬರಮಾಡು" ಎಂದ ಮಂತ್ರಿ. ಅವನ ಶರೀರ ಕೋಪದಿಂದ ಗಡಗಡನೆ ಕಂಪಿಸುತಿತ್ತು.

"ಕಾವಲುಗಾರರ ಕರ್ತವ್ಯ ಲೋಪವೇನೂ ಇಲ್ಲ, ಮಂತ್ರಿಗಳೇ. ಕೋಶಾಗಾರದ ಬಾಗಿಲು ಮುಚ್ಚಿದಂತೆಯೇ ಇದೆ. ಬೀಗ ತೆಗೆದ ಚಿಹ್ನೆಗಳೂ ಕಾಣಿಸುತ್ತಿಲ್ಲ. ಎಲ್ಲಾ ಮಟ್ಟಾಮಾಯವಾಗಿದೆ" ಎಂದ ಕೋಶಾಧಿಕಾರಿ ಆಕಾಶದತ್ತ ಕೈ ಎತ್ತಿ.

"ಎಲ್ಲಾ ಮಾಯೆ, ಅಲ್ಲವೇ?" ಎಂದು ಮಂತ್ರಿ ಕೋಶಾಧಿಕಾರಿಯ ಕಡೆ ಕಿಡಿಕಾರುತ್ತಾ ಹೀಗೆಂದನು: "ಈ ಮಾಯಕ್ಕೆ ಪ್ರತಿಫಲ ನಿನಗೆ ಗಲ್ಲುಶಿಕ್ಷೆ. ನಡಿ, ಅರಸರ ಬಳಿಗೆ ಹೋಗೋಣ"

ಮಂತ್ರಿ ಮತ್ತು ಕೋಶಾಧಿಕಾರಿ ಅರಸನ ಕೊಠಡಿಯನ್ನು ಸಮೀಪಿಸುವಷ್ಟರಲ್ಲಿ ಸೆರೆಮನೆಯ ಅಧಿಕಾರಿ ಬೊಬ್ಬಿಡುತ್ತಾ ಅಲ್ಲಿಗೆ ಓಡಿ ಬಂದು "ಮಂತ್ರಿವರ್ಯಾ, ಮಹಾಪ್ರಮಾದವಾಯಿತು. ಜೀವದತ್ತ ಮತ್ತು ಲಕ್ಷದತ್ತರು ಮಾಯವಾಗಿದ್ದಾರೆ" ಎಂದನು.

ಈ ಸುದ್ದಿ ಕೇಳಿ ಮಂತ್ರಿಗೆ ಹುಚ್ಚು ಹಿಡಿದಂತಾಯಿತು. ಅವನು ಆ ಅಧಿಕಾರಿಯನ್ನು ದುರುಗುಟ್ಟಿಕೊಂಡು ನೋಡಿ "ಆ ಜೀವದತ್ತ ಲಕ್ಷದತ್ತರು ದೇವತೆಗಳೇನು? ಹೇಗೆ ಮಾಯವಾದರು?" ಎಂದು ಗದರಿಸಿದನು.




"ಅವರಿದ್ದ ಸ್ಥಳದಲ್ಲಿ ಭಾರಿ ಸುರಂಗವಿದೆ. ಅಷ್ಟೊಂದು ಭಾರಿ ಸುರಂಗವನ್ನು ಮಾನವನು ಮಾಡಲು ಸಾಧ್ಯವಿಲ್ಲ. ದೇವತೆಗಳೋ, ರಾಕ್ಷಸರೋ ಮಾಡಿರಬೇಕು" ಎಂದ ಅಧಿಕಾರಿ.

ಮಂತ್ರಿ ತುಸಹೊತ್ತು ಆಲೋಚನಾಮಗ್ನನಾದನು. ನದೀತೀರದಲ್ಲಿ ಒಂದೇ ಒಂದು ರಾತ್ರಿಯಲ್ಲಿ ನಿರ್ಮಿತವಾಗಿರುವ ಭವ್ಯ ಭವನ, ರಕ್ಷಕಭಟರ ನಾಯಕನ ಗೋಳಾಟ, ರಾಜಭವನದಲ್ಲಿ ನಡೆದಿರುವ ವಿಚಿತ್ರ ಘಟನೆಗಳನ್ನು ನೋಡಿದರೆ ಇವು ಮಾನವರಿಂದ ಆಗುವ ಕಾರ್ಯವಲ್ಲವೆಂದು ತೋರಿತು. ಸೆರೆಮನೆಯಲ್ಲಿದ್ದ ಜೀವದತ್ತ ಲಕ್ಷದತ್ತರಿಗೆ ಮಹಾ ಮಾಂತ್ರಿಕನಾದ ಪಿಂಗಳನೆಂಬ ಒಬ್ಬ ತಮ್ಮನಿರುವವಿಷಯ ಮಂತ್ರಿಗೆ ತಿಳಿದಿತ್ತು.



ಈಗ ನಡೆದಿರುವುದನ್ನೆಲ್ಲಾ ಮಹಾರಾಜರಿಗೆ ತಿಳಿಸುವುದು ಉಚಿತವೆಂದು ಮಂತ್ರಿಗೆ ತೋರಿತು. ಮಂತ್ರಗಾರ ಪಿಂಗಳನು ಈಗ ಅವಂತಿನಗರಕ್ಕೆ ಹಿಂತಿರುಗಿ ಬಂದಿರಬೇಕೆಂದು ಆತನು ಊಹಿಸಿದನು.

ರಾಜನ ಕೋಣೆಗೆ ಹೋದರೆ ಅಲ್ಲೂ ಗೊಂದಲವೆದ್ದಿತ್ತು! "ನಿಜ ಹೇಳದಿದ್ದರೆ ನಿಮ್ಮೆಲ್ಲರ ತಲೆ ಹಾರಿಸುತ್ತೇನೆ. ಎಲ್ಲಿ ನನ್ನ ಮಹಿಮಾಶೀಲವುಳ್ಳ ಚೀಲ?" ಎಂದು ರಾಜನು ಗುಡುಗುತ್ತಿದ್ದನು. ಅವನ ಮುಂದೆ ಪಾಕಶಾಲೆಯ ನೌಕರುವರ್ಗವೆಲ್ಲಾ ಕೈಕಟ್ಟಿಕೊಂಡು, ತಲೆ ತಗ್ಗಿಸಿ ಸಾಲಾಗಿ ನಿಂತಿದ್ದರು. ಮಂತ್ರಿಯನ್ನು ಕಂಡಾಕ್ಷಣ ರಾಜನು "ಮಂತ್ರಿ, ಇವರೆಲ್ಲರನ್ನು ಹೆಡಮುರಿಕಟ್ಟಿ ಆನೆಯ ಕಾಲುಗಳಿಂದ ತುಳಿಸಿಬಿಡು. ನೀಚರು ನನ್ನ ಅದ್ಭುತ ಚೀಲವನ್ನು ಅಪಹರಿಸಿದ್ದಾರೆ" ಎಂದು ಉದ್ರೇಕದಿಂದ ನುಡಿದನು.

"ಮಹಾಪ್ರಭು, ಇನ್ನೂ ಅನೇಕ ವಿಚಿತ್ರ ಕಾರ್ಯಗಳು ನಮ್ಮ ನಗರದಲ್ಲಿ ನಡೆದಿವೆ" ಎಂದು ಮಂತ್ರಿ ರಾಜನಿಗೆ ಎಲ್ಲ ವಿಷಯಗಳನ್ನೂ ತಿಳಿಸಿದನು. ಮಂತ್ರಿಯ ಮಾತನ್ನು ಕೇಳಿ ರಾಜನು ಉರಿದೆದ್ದು "ಐವತ್ತು ಜನ ಭಟರೊಂದಿಗೆ ಹೋಗಿ ಆ ಭವನದಲ್ಲಿರುವವರನ್ನೆಲ್ಲಾ ಹೆಡಮುರಿಕಟ್ಟಿ ಇಲ್ಲಿಗೆ ಎಳೆ ತರುವಂತೆ ಅರಮನೆಯ ರಕ್ಷಕಭಟರ ನಾಯಕನಿಗೆ ಆಜ್ಞಾಪಿಸು" ಎಂದನು.

"ಮಹಾಪ್ರಭುಗಳು ಸಾವಧಾನ ಚಿತ್ತರಾಗಿ ಆಲೋಚಿಸಬೇಕು" ಎಂದು ಮಂತ್ರಿ ಏನೋ ಸಲಹೆ ಹೇಳಲು ಸಿದ್ಧನಾಗುತ್ತಿರಲು, ರಾಜನು ಸರಕ್ಕನೆ ಎದ್ದು "ನೀನು ಆ ಜಾಲರಿ ಪಿಂಗಳನಿಗೆ ರಾಜ್ಯವನ್ನು ಒಪ್ಪಿಸಿ, ಅವನ ಅಮಾತ್ಯನಾಗಲು ಹವಣಿಸುತ್ತಿರುವಂತಿದೆ" ಎಂದು ಕಟುವಾಗಿ ನುಡಿದನು.

ಮಂತ್ರಿಯ ಮುಖ ಪೆಚ್ಚಾಯಿತು. ಆತನೇನೂ ಮಾತನಾಡಲಿಲ್ಲ. ಅಲ್ಲಿಗೆ ಬಂದಿದ್ದ ರಕ್ಷಕಭಟರ ನಾಯಕನು ಮಹಾರಾಜನಿಗೆ ವಂದಿಸಿ "ಆ ಮಾಂತ್ರಿಕನನ್ನು ನಮ್ಮ ಕುದುರೆಯಕಾಲಿಗೆ ಕಟ್ಟಿ ಎಳೆದುಕೊಂಡು ಬರಲೇ?" ಎಂದು ಕೇಳಿದನು.

"ಕುದುರೆಗಾದರೂ ಕಟ್ಟಿ ಎಳೆದುಕೊಂಡು ಬಾ, ಕತ್ತೆ ಕಾಲಿಗಾದರೂ ಕಟ್ಟಿ ಎಳೆದು ತಾ.



ನನಗದಲ್ಲ ಮುಖ್ಯ. ನನಗೆ ಬೇಕಾಗಿರುವುದೆಲ್ಲ ಆ ಚೇಲ, ನನ್ನ ಭಂಡಾರದಲ್ಲಿದ್ದ ಹಣ, ತಿಳಿಯಿತೇ? ಇನ್ನು ನೀನು ಹೊರಡು" ಎಂದು ಕೋಪಾವಿಷ್ಟನಾಗಿ ನುಡಿದ ರಾಜ.

ರಕ್ಷಕಭಟರ ನಾಯಕನು ಐವತ್ತು ಜನ ಸಶಸ್ತ್ರಭಟರನ್ನು ಕರೆದುಕೊಂಡು ಪಿಂಗಳನ ಭವನವನ್ನು ಸಮೀಪಿಸಿದನು.

ಅಲ್ಲಿ ಮಹಾದ್ವಾರದಬಳಿಯಲ್ಲಿರುವ ಕಲ್ಲು ಕುರ್ಚಿಯಮೇಲೆ ಕುಳಿತು, ತೂಕಡಿಸುತ್ತಿದ್ದ ಭಲ್ಲೂಕಕೇತನನ್ನು ಕಂಡು ಭಟರು ಭೀತಿಗೊಂಡರು. "ಇವನು ಯಾರೋ ರಾಕ್ಷಸನಂತಿದ್ದಾನೆ. ಅಬ್ಬಬ್ಬ! ಆನೆ ಕಿವಿಗಳಂತಿರುವ ಅವನ ಕಿವಿಗಳನ್ನು ಕಾಡು ಹಂದಿಯಕೋರೆಯನ್ನು ಹೋಲುವ ಅವನ ಹಲ್ಲುಗಳನ್ನು ನೋಡಿದರೆ ಭಯವಾಗುತ್ತದೆ" ಎಂದು ಮೆಲ್ಲನೆ ಹಿಂದೆಜ್ಜೆ ಹಾಕಿದರು.

ಅವರ ನಾಯಕನು ಗಹಗಹಿಸಿ ನಗುತ್ತಾ "ಎಲೈ, ಅಮಾಯಕರೇ, ನೀವು ಹೆದರದಿರಿ. ಅವನು ನಮ್ಮನ್ನು ಹೆದರಿಸಲು ಈ ವೇಷಧರಿಸಿ ಇಲ್ಲಿ ಕುಳಿತಿರುವನು" ಎಂದು ತನ್ನ ಕುದುರೆಯನ್ನು ಭಲ್ಲೂಕಕೇತನಬಳಿಗೆ ಓಡಿಸಿ, ತನ್ನ ಬಳಿಯಿದ್ದ ಈಟಿಯಿಂದ ಅವನನ್ನು ಚುಚ್ಚಿ "ಎಲ್ಲವೋ ಉದ್ಧಟ, ಕಣ್ಣು ತೆರೆ. ಅರಮನೆಯ ರಕ್ಷಕಭಟರ ನಾಯಕನಾದ ನಾನು ಬಂದಿರುತ್ತೇನೆ" ಎಂದ ದರ್ಪದಿಂದ.

ಭಲ್ಲೂಕಕೇತನು ಕಣ್ಣು ತೆರೆದು ತನ್ನ, ಭುಜಕ್ಕೆ ತಗಲುತ್ತಿದ್ದ ಭರ್ಚಿಯನ್ನು ಸರಕ್ಕನೆ



ಎಳೆದುಕೊಂಡು ಗಿರಗಿರನೆ ತಿರುಗಿಸಿ, ರಾಜಭಟರ ನಾಯಕನ ಹೊಟ್ಟೆಗೆ ಗುರಿಯಿಟ್ಟು ಎಸೆದನು. ಭಟನು ಆ ಪೆಟ್ಟಿಗೆ ತಾಳಲಾರದೆ ಕೆಳಗೆ ಬಿದ್ದು ವಿಲವಿಲ ಒದ್ದಾಡುತ್ತಿದ್ದನು. ಭಲ್ಲೂಕಕೇತನು ಅವನ ಎರಡು ಕಾಲುಗಳನ್ನು ಹಿಡಿದು ಗಿರ್ರನೆ ತಿರುಗಿಸಿ ನದಿಗೆ ಒಗೆದನು. ಈ ದೃಶ್ಯವನ್ನು ಕಂಡು ಉಳಿದ ಭಟರು ಹಾಹಾಕಾರ ಮಾಡುತ್ತ ಪಲಾಯನ ಮಾಡಿದರು. ಭಲ್ಲೂಕಕೇತನು ಅವರಕಡೆ ನೋಡಿ ಮುಸಿಮುಸಿ ನಕ್ಕು, ಮತ್ತೆ ತನ್ನ ಆಸನದಲ್ಲಿ ಕುಳಿತು ಕಣ್ಣು ಮುಚ್ಚಿಕೊಂಡನು.

ಅಲ್ಲಿಂದ ಪರಾರಿಯಾದ ಭಟರು ಕಂಬನಿ ಸುರಿಸುತ್ತಾ ರಾಜನಬಳಿ ಸಾರಿ ನಡೆದ ಸಂಗತಿಯನ್ನು ತಿಳಿಸಿದರು.




ರಾಜನಿಗ ಮತ್ತಷ್ಟು ಕೋಪಬಂತು. "ಎಲೈ, ಹೇಡಿಗಳೇ! ಒಬ್ಬ ಅಡವಿ ಜಾತಿಯ ಮನುಷ್ಯನನ್ನು ಎದುರಿಸಲು ನಿಮ್ಮಿಂದ ಸಾಧ್ಯವಾಗಲಿಲ್ಲವೇ. ಧಿಕ್ಕಾರವಿರಲಿ ನಿಮ್ಮ ಗಂಡಸುತನಕ್ಕೆ" ಎಂದನು. ಆಗ ಮಂತ್ರಿ ಮುಂದೆ ಬಂದು "ಮಹಾಪ್ರಭುಗಳಿಗೆ ಅವಸರ ಕೂಡದು. ಅವನು ಅಡವಿ ಜಾತಿಯವನೋ, ರಾಕ್ಷಸನೋ ನಮಗೆ ತಿಳಿಯದು. ಆ ಜಾಲರಿ ಮಾಂತ್ರಿಕನೆಂಬ ವಿಷಯ ನಿಮಗೂ ತಿಳಿದಿದೆ. ಆದುದರಿಂದ ದುಡಕಿ ಏನೂ ನಿಶ್ಚಯಿಸಿಬಿಡಬಾರದು." ಎಂದ ವಿನಯದಿಂದ.

"ಇರಬಹುದು. ಅವನೆಷ್ಟೇ ದೊಡ್ಡ ಮಾಂತ್ರಿಕನಿರಲಿ, ಅವಂತಿನಗರದ ರಾಜನಾದ ನನ್ನನ್ನು ಕಡೆಗಣಿಸಬಹುದೇ? ಅವನ ತಲೆ ಕಡಿದು ಕೋಟೆ ಬಾಗಿಲಿಗೆ ಕಟ್ಟಿ ಹಾಕಿಸುತ್ತೇನೆ" ಎಂದು ಹೇಳಿ ಸೇನಾಧಿಕಾರಿಯನ್ನು ಕೂಗಿದನು.

"ಮಹಾಪ್ರಭು" ಎಂದು ಸೇನಾಧಿಕಾರಿ ಮುಂದೆ ಬಂದನು.

ಪಿಂಗಳನು ಕಟ್ಟಿಸಿರುವ ಭವನವನ್ನು ನೆಲಸಮಮಾಡಿ, ಆ ಮಾಂತ್ರಿಕನೊಂದಿಗೆ ಅವನ ತಾಯಿ ಮತ್ತು ಸಹೋದರರನ್ನು ಬಂಧಿಸಿ ತರುವಂತೆ ರಾಜನು ಆತನಿಗೆ ಆಜ್ಞಾಪಿಸಿದನು.

ಸೇನಾಧಿಕಾರಿಯ ಉತ್ಸಾಹಕ್ಕೆ ಎಣೆಯಿಲ್ಲ. ಈ ನಡುವೆ ಕೆಲವಾರು ವರ್ಷಗಳಿಂದ ಯುದ್ಧಗಳಿಲ್ಲದೆ ಆವನಿಗೆ ತುಂಬಾ ಬೇಸರವಾಗಿತ್ತು. ನದಿ ತೀರದಲ್ಲಿರುವ ಭವನವನ್ನು ನೆಲಸಮಮಾಡಿ, ಅಲ್ಲಿ ನೆಲಸಿರುವವರನ್ನು ಚಿತ್ರಹಿಂಸೆ ಮಾಡಿ ತನ್ನ ಯುದ್ಧದ ಚಪಲವನ್ನು ಸ್ವಲ್ಪ ಮಟ್ಟಿಗೆ ತೀರಿಸಿಕೊಳ್ಳಬಹುದೆಂದು ಸೇನಾಧಿಕಾರಿ ಭಾವಿಸಿದನು.

"ಈ ಪಿಂಗಳನಿಗೆ ಸಣ್ಣಪುಟ್ಟ ಸೈನ್ಯವಿದ್ದಿದ್ದರೆ ಮತ್ತೂ ಚೆನ್ನಾಗಿರುತಿತ್ತು. ಅವರೊಂದಿಗೆ ಭೀಕರ ಸಂಗ್ರಾಮವನ್ನು ಮಾಡುತ್ತಿದ್ದೆ" ಎಂದುಕೊಂಡ ಸೈನ್ಯಾಧಿಕಾರಿ.

ಇನ್ನೂರು ಜನ ಆಶ್ವಿಕರನ್ನೂ, ಮುನ್ನೂರು ಜನ ಕಾಲಾಳುಗನ್ನೂ ಕರೆದುಕೊಂಡು ಸೇನಾಧಿಕಾರಿ ಮೆರೆಯುತ್ತಾ ಹೊರಟು ಪಿಂಗಳನ ಭವನವನ್ನು ಸಮೀಪಿಸಿದನು. ಭಲ್ಲೂಕಕೇತನು ನಿದ್ರಿಸುತ್ತಿರುವವನಂತೆ ನಟಿಸುತ್ತಾ, ಸೇನಾಧಿಕಾರಿಯ ಚಲನವಲನಗಳನ್ನು ಗಮನಿ



ಸುತ್ತಿದ್ದನು. ಸೇನಾನಾಯಕನು ಮಹಾದ್ವಾರದಬಳಿಗೆ ಬಂದು, ತನ್ನ ಈಟಿಯನ್ನು ಭಲ್ಲೂಕಕೇತನತ್ತ ಗುರಿಯಿಟ್ಟು "ಎಲವೋ, ಕಾಡುಮನುಷ್ಯ ಏಳು, ಎದ್ದೇಳು. ನಿನ್ನ ಯಜಮಾನನೆಲ್ಲಿ?" ಎಂದು ದರ್ಪದಿಂದ ಕೇಳಿದನು.

ಭಲ್ಲೂಕಕೇತನು ಆಗಲೇ ನಿದ್ರಯಿಂದ ಎಚ್ಚೆತ್ತವನಂತೆ, ಮೈಮುರಿದು ಎದ್ದು ನಿಂತು ಒಮ್ಮೆ ಆಕಳಿಸಿ, ಸೇನಾಧಿಕಾರಿಯ ಕಡೆ ನೋಡಿ "ಯಾವ ಮಾನವಾಧಮನು ನನ್ನನ್ನು ಕೂಗಿದ್ದು?" ಎಂದು ಗುಡುಗಿದನು.

ಭಲ್ಲೂಕಕೇತನ ವಿಚಿತ್ರ ಧೋರಣೆ ಕಂಡು ಸೇನಾಧಿಕಾರಿ ಕುಪಿತನಾದನು. ಅವನು ಈಟಿಯನ್ನು ಭಲ್ಲೂಕಕೇತನ ಎದೆಗೆ ಗುರಿಯಿಟ್ಟು, ಎಸೆದು ಕುದುರೆಯನ್ನು ರಭಸದಿಂದ ಮುಂದಕ್ಕೆ ಓಡಿಸಿದನು.

ಭಲ್ಲೂಕಕೇತನು ಕೂಡಲೇ ಸ್ವಲ್ಪ ಪಕ್ಕಕ್ಕೆ ಸರಿದು ನಿಂತು ಈಟಿಯಹೊಡತದಿಂದ ತಪ್ಪಿಸಿಕೊಂಡು, ಕುದುರೆಯಮೇಲಿದ್ದ ಅಧಿಕಾರಿಯನ್ನು ಹಿಡಿದೆತ್ತಿ, ಕಲ್ಲುಕುರ್ಚಿಯಮೇಲೆ ಕೆಡವಿ, ಅವನಮೇಲೆ ಕುಳಿತುಕೊಂಡು, ಒಮ್ಮೆ ಚಪ್ಪಾಳೆ ತಟ್ಟಿದನು.

ಕೂಡಲೇ ಗಬಗಬನೆ ಅವನ ಅನುಚರರು ವಿವಿಧ ಶಿಲಾಯುಧಗಳನ್ನು ಹಿಡಿದು ಅಲ್ಲಿಗೆ ಧಾವಿಸಿ ಬಂದರು. ಭಲ್ಲೂಕಕೇತನು ಅವರಿಗೆ ಓಡಿಹೋಗಲು ಹವಣಿಸುತ್ತಿದ್ದ ರಾಜಭಟರನ್ನು ತೋರಿಸಿ "ಈ ದುರಹಂಕಾರಿಗಳಿಗೆ ತಕ್ಕ ಶಾಸ್ತಿಮಾಡಿ" ಎಂದು ಕಟ್ಟಪ್ಪಣೆಮಾಡಿದ.



ಅವನ ಆಜ್ಞೆಯಂತೆ ಅವರು ರಾಜಭಟರ ಮೇಲೆ ಬಿದ್ದು ಅವರನ್ನು ಹಣ್ಣುಗಾಯಿ ನೀರುಗಾಯಿ ಮಾಡಿದರು.

ಈ ವಿಚಿತ್ರವಾದ ದೃಶ್ಯವನ್ನು ಉಪ್ಪರಿಗೆಯಿಂದ ನೋಡುತ್ತಿದ್ದ ಪಿಂಗಳ, ಅವನ ತಾಯಿ ಮತ್ತು ಸಹೋದರರು ಹೊಟ್ಟೆ ಹುಣ್ಣಾಗುವಂತೆ ಬಿದ್ದುಬಿದ್ದು ನಗುತ್ತಿದ್ದರು.

ಸಜೀವಿಗಳಾಗಿ ಕೆಲವುಮಂದಿ ಅರಮನೆಗೆ ಹೋಗಿ, ರಾಜನಿಗೆ ತಮಗುಂಟಾದ ವಿಪತ್ತನ್ನು ತಿಳಿಸಿದರು. ಆಗ ರಾಜನಿಗೆ ಪಿಂಗಳನು ಸಾಮಾನ್ಯ ಐಂದ್ರಜಾಲಿಕನಲ್ಲವೆಂಬ ವಿಷಯ ಅರ್ಥವಾಯಿತು.

ಅವನು ಉಕ್ಕಿಬರುತ್ತಿದ್ದ ಕೋಪವನ್ನು ತಡೆಹಿಡಿದು, ಮಂತ್ರಿಯನ್ನುಕುರಿತು "ಅಮಾ

ತ್ಯರೇ, ಇದು ತುಂಬಾ ಅವಮಾನಕರವಾದ ವಿಷಯ. ಉಳಿವೋ ಅಳಿವೋ ನಾನೇ ಸ್ವತಃ ಸೈನ್ಯವನ್ನು ತೆಗೆದುಕೊಂಡು ಹೋಗಿ ಪಿಂಗಳನೊಂದಿಗೆ ಹೋರಾಡುವೆನು. ನಾನೊಂದು ವೇಳೆ ಮರಣಹೊಂದಿದರೆ ನನ್ನ ಒಬ್ಬಳೇ ಮಗಳನ್ನು ನೀನು ಕಾಪಾಡಬೇಕು. ಅನುರೂಪನಾದವರನನ್ನು ಹುಡುಕಿ ಅವಳಿಗೆ ಮದುವೆಮಾಡಬೇಕು " ಎಂದನು.

ಮಂತ್ರಿ ಒಂದು ಕ್ಷಣಕಾಲ ಯೋಚಿಸಿ " ಮಹಾಪ್ರಭೂ, ತಾವು ಆಗ್ರಹಗೊಳ್ಳದಿದ್ದರೆ ನಾನೊಂದು ವಿಷಯವನ್ನು ತಮ್ಮಲ್ಲಿ ಅರಿಕೆ ಮಾಡಿಕೊಳ್ಳುವೆನು " ಎಂದನು.

"ಏನದು ?" ಎಂದು ಕೇಳಿದ ರಾಜ.

" ಪಿಂಗಳನು ಯುವಕ. ಅವಿವಾಹಿತ. ಅವನು ಸುರೂಪಿಯೆಂದು ಜನರಾಡಿಕೊಳ್ಳುವುದನ್ನು ಕೇಳಿರುವೆನು. ಐಶ್ವರ್ಯ, ಶೌರ್ಯ ಸಾಹಸಗಳಲ್ಲಿ ಅವನಿಗೆ ಅವನೇ ಸಾಟಿ. ಯಾವದೇಶದ ರಾಜಕುಮಾರನಿಗೂ ಅವನು ಕಡಿಮೆಯಲ್ಲವೆಂದು ಪ್ರತೀತಿ. ರಾಜಕುಮಾರಿಯನ್ನು ಆತನಿಗೆ ಕೊಟ್ಟು ವಿವಾಹಮಾಡಿದರೆ ನಿಮಗೂ, ನಿಮ್ಮ ರಾಜ್ಯಕ್ಕೂ ಒದಗಿರುವ ಆಪತ್ತು ತಪ್ಪುವುದು " ಎಂದನು.

ರಾಜನು ಕೊಂಚಕಾಲ ಯೋಚಿಸಿ " ಹೌದು. ಮಂತ್ರಿ. ಇದು ಕಾಲೋಚಿತವಾದ ಅಭಿಪ್ರಾಯ. ನಿನ್ನ ಯೋಚನೆ ನನಗೂ ಸಮ್ಮತವೇ !" ಎಂದ.

ಮಂತ್ರಿ ಸರ್ವ ಲಾಂಛನಗಳೊಂದಿಗೆ ಪಿಂಗಳ ಮತ್ತು ಅವನ ತಾಯಿಯನ್ನು ಭೇಟಿ ಮಾಡಿ, ಅವರಿಗೆ ರಾಜನ ಅಭೀಷ್ಟವನ್ನು ತಿಳಿಸಿದನು. ರಾಜಕುಮಾರಿಯ ಸೌಂದರ್ಯವನ್ನು ಕುರಿತು ಕೇಳಿದ್ದ ಪಿಂಗಳನು ಈ ಸಂಬಂಧಕ್ಕೆ ಒಪ್ಪಿಕೊಂಡನು.

ತರುವಾಯ ಕೆಲವು ದಿನಗಳಿಗೆ ವಕುಲಾ ಪಿಂಗಳರಿಗೆ ವೈಭವದಿಂದ ವಿವಾಹ ನಡೆಯಿತು. ಪ್ರಸಿದ್ಧ ಮಾಂತ್ರಿಕ ಪದ್ಮಪಾದನು ಮದುವೆಗೆ ಬಂದು ವಧೂವರರಿಗೆ ಆಶೀರ್ವಾದ ಮಾಡಿದನು.

ಮುಂದೆ ರಾಜನು ತೀರಿಹೋದಮೇಲೆ ಪಿಂಗಳನೇ ಅವಂತಿ ನಗರದ ರಾಜನಾಗಿ, ರಾಜ್ಯಭಾರ ಮಾಡಿದನು. (ಮುಗಿಯಿತು)



# ಮೌನ ವಹಿಸಿದ ದೇವರು

ಬೇಸರಹೊಂದದ ತ್ರಿವಿಕ್ರಮನು ಮತ್ತೆ ಮರದಬಳಿಗೆ ಹೋಗಿ, ಮೇಲಿದ್ದ ಶವವನ್ನು ಕೆಳಕ್ಕಿಳಿಸಿ ಮತ್ತೊಮ್ಮೆ ಶ್ಮಶಾನದತ್ತ ನಡೆಯತೊಡಗಿದನು. ಆಗ ಶವದಲ್ಲಿದ್ದ ಬೇತಾಳ "ಎಲೈ ರಾಜನೇ, ಮಾನವನಿಗೆ ಎಲ್ಲಕ್ಕಿಂತಲೂ ಮಿಗಿಲಾದುದು ವಿಶ್ವಾಸ. ಯಾವ ಪರಿಸ್ಥಿತಿಯಲ್ಲೂ ಮಾನವನು ವಿಶ್ವಾಸವನ್ನು ಕಳೆದುಕೊಳ್ಳಬಾರದು. ಪೂರ್ವಕಾಲದಲ್ಲಿ ಸತ್ಯಪಾಲನೆಂಬ ಯುವಕನು ವಿಶ್ವಾಸವನ್ನು ಕಳೆದುಕೊಂಡು ಅಪರಾಧವೆಸಗಿದ ಕಥೆಯನ್ನು ನಿನಗೆ ತಿಳಿಸುವೆನು" ಎಂದಿತು.

ಹಿಂದೆ ಭದ್ರಾವತಿ ನಗರದಲ್ಲಿ ಒಂದಾನೊಂದು ರಾಮದೇವರ ದೇವಾಲಯವಿತ್ತು. ಆ ಆಲಯದಲ್ಲಿನ ಶ್ರೀರಾಮಮೂರ್ತಿ ತುಂಬಾ ಮಹಿಮೆಯುಳ್ಳ ದೇವರು. ತನ್ನ ಪೂಜಾರಿಯ ಮೂಲಕ ಭಕ್ತರ ಸಂದೇಹಗಳನ್ನು ಪರಿಹರಿಸುತ್ತಿದ್ದನು. ಅವರಿಗೊದಗಬಹುದಾದ ಕಷ್ಟಗಳಿಂದ ಪಾರುಮಾಡುತ್ತಿದ್ದನು. ಒಂದೊಂದು



ಸಾರಿ ದೇವರೇ ತಾನಾಗಿ ಮಾತನಾಡುವುದುಂಟು. ಆಗ ಆಲಯದಲ್ಲಿರುವ ಭಕ್ತರು ತನ್ಮಯತೆ ಹೊಂದುವರು.

ಆ ಆಲಯದಲ್ಲಿ ಆಂಜನೇಯಸ್ವಾಮಿ ಎಂಬಾತನು ಪೂಜಾರಿಯಾಗಿದ್ದನು. ಪ್ರಜೆಗಳೂ ಸಹ ಆತನನ್ನು ಆಂಜನೇಯನ ಅಪರಾವತಾರವೆಂದೇ ಭಾವಿಸುತ್ತಿದ್ದರು.

ಭದ್ರಾವತಿ ರಾಮದೇವಾಲಯದ ಕೀರ್ತಿ ದೇಶದೇಶಗಳಲ್ಲಿ ವ್ಯಾಪಿಸಿತು. ಭಕ್ತರು ದೇವರ ದರ್ಶನಹೊಂದಲು ತಂಡೋಪತಂಡವಾಗಿ ಬರುತ್ತಿದ್ದರು. ಈ ಯಾತ್ರಿಕರಿಂದ ಭದ್ರಾವತಿ ನಗರದ ಆರ್ಥಿಕಸ್ಥಿತಿ ಉತ್ತಮವಾಗಿ ಅದೊಂದು ಮಹಾನಗರವಾಯಿತು. ಹೀಗಿರಲು, ಒಮ್ಮೆ ಆಂಜನೇಯಸ್ವಾಮಿಗೆ ಖಾಯಿಲೆ ಬಂದು, ಕೆಲವಾರು ದಿನಗಳಲ್ಲಿ ಶ್ರೀರಾಮದೇವರಲ್ಲಿ ಐಕ್ಯನಾದನು. ಆಲಯಕ್ಕೆ ಬೇರೊಬ್ಬ ಪೂಜಾರಿಯನ್ನು ನೇಮಿಸಬೇಕಾಯಿತು. ಪ್ರಜೆಗಳೆಲ್ಲರೂ ಸತ್ಯಪಾಲನೆಂಬ ಯುವಕನನ್ನು ಆ ಸ್ಥಳದಲ್ಲಿ ನೇಮಿಸಿದರು.

ಸತ್ಯಪಾಲನಿಗೆ ಬಾಲ್ಯದಿಂದಲೂ ಶ್ರೀರಾಮನಲ್ಲಿ ಬಹುಭಕ್ತಿ. ಅವನು ಸದಾ ಶ್ರೀರಾಮನಾಮ ಸಂಕೀರ್ತನೆಯಲ್ಲಿ ಕಾಲಕಳೆಯುವನು. ಅದುಹೊರತು ಅವನಿಗೆ ಬೇರೊಂದು ಹವ್ಯಾಸವಿಲ್ಲ. ಅವನಿಗೆ ದೇವತಾರ್ಚನೆ ಮಾಡುವ ಪದ್ಧತಿ ಸಹ ತಿಳಿದಿತ್ತು. ಅಂತಲೇ ಸತ್ಯಪಾಲನು ರಾಮಾಲಯಕ್ಕೆ ಪೂಜಾರಿಯಾಗಲು ಅರ್ಹತೆ ಪಡೆದಿದ್ದನು.

ಆದರೆ ಒಂದು ಪ್ರಮಾದ ಒದಗಿಬಂತು. ಸತ್ಯಪಾಲನು ಅರ್ಚಕನಾದ ದಿನದಿಂದ ಶ್ರೀರಾಮದೇವರು ಮೌನವಹಿಸಿದರು. ಎಂದಿನಂತೆ ಭಕ್ತಾದಿಗಳು ಬಂದು ದೇವರನ್ನು ಬಗೆಬಗೆಯ ಪ್ರಶ್ನೆ ಕೇಳಿದರು. ಆದರೆ ಅವರಿಗೆ ಯಾವ ಸಮಾಧಾನ ಕೊಡಬೇಕೋ ದೇವರು ಅರ್ಚಕನಿಗೆ ಹೇಳಲಿಲ್ಲ. ದೇವರು ಮಾತನಾಡುವುದಂತೂ ಒತ್ತೊಟ್ಟಿಗೆ ಉಳಿಯಿತು. ಈ ಬದಲಾವಣೆ ಕಂಡು ಸತ್ಯಪಾಲನು ಕಳವಳಚಿತ್ತನಾದನು. "ಸ್ವಾಮಿ, ನನ್ನಿಂದ ಆದ ಅಪಚಾರವೇನು? ನೀನೇಕೆ ಮೌನಮೂರ್ತಿಯಾಗಿರುವೆ? ನೀನು ಈ ರೀತಿ ಮೌನವಹಿಸುವ ಬದಲು ನನಗೆ ಯಾವುದಾದರೂ ಶಿಕ್ಷೆ ಕೊಡಬಾರದೇ?" ಎಂದು

ಮೂರ್ತಿಯಮುಂದೆ ಕುಳಿತು ಕೇಳಿಕೊಳ್ಳು ವನು. ಆದರೆ ಶಿಲಾಮೂರ್ತಿ ಏನೊಂದೂ ಮಾತನಾಡುತ್ತಿರಲಿಲ್ಲ.

ಸತ್ಯಪಾಲನು ನಗರದ ಹಿರಿಯರನ್ನು ಭೇಟಿ ಮಾಡಿ "ಇಂತಹ ಮಹಿಮಾವಂತನಾದ ದೇವರು ಮೌನವಹಿಸಿರಲು ನಾನೇ ಕಾರಣ ನಿರಬೇಕು. ನಾನೇನೋ ಅಪಚಾರವೆಸಗಿರ ಬೇಕು" ಎಂದನು.

"ಹೌದು ತಮ್ಮಾ, ತಪ್ಪು ನಿನ್ನಲ್ಲೇ ಇರ ಬೇಕು. ಅದನ್ನು ಹೇಗಾದರೂ ಸರಿಪಡಿಸಿ ಕೊಂಡು ದೇವರ ವಿಶ್ವಾಸವನ್ನು ಪಡೆ. ಇಲ್ಲ ದಿದ್ದರೆ ದೇವಾಲಯದ ಕೀರ್ತಿಪ್ರತಿಷ್ಠೆಗಳು ಮಾಯವಾಗುವುವು. ಯಾತ್ರಿಕರು ಬರು ವುದು ನಿಂತುಹೋದರೆ ನಮ್ಮ ನಗರಕ್ಕೆ ಅರಿಷ್ಟ ಪ್ರಾಪ್ತವಾಗುವುದು" ಎಂದರು ಅನುಭವಸ್ಥರಾದ ಹಿರಿಯರು.

ಸತ್ಯಪಾಲನಿಗೆ ದಿಕ್ಕೇ ತೋರದಾಯಿತು. ಅವನು ಆಲಯಕ್ಕೆ ಹಿಂತಿರುಗಿ ಹೋಗಿ ಗುಡಿಯ ಹೊಸ್ತಿಲಿನಬಳಿ ಕುಳಿತು ಯೋಚಿಸು ತ್ತಿದ್ದನು. ಆಗಲೇ ಗುಡಿಗೆ ಬರುವವರ ಸಂಖ್ಯೆ ಕಡಿಮೆಯಾಗುತಿತ್ತು.

ಮಧ್ಯಾಹ್ನದವೇಳೆಗೆ ಆ ಪ್ರದೇಶ ನಿರ್ಜನ ವಾಗಿತ್ತು. ಯಾರೋ ಬರುತ್ತಿರುವ ಸದ್ದನ್ನು ಕೇಳಿ ಸತ್ಯಪಾಲನು ತಲೆ ಎತ್ತಿ ನೋಡಿದನು. ಅವನಿಗೊಬ್ಬ ಮುದುಕಿ ಕಾಣಿಸಿದಳು.

ಆಕೆ ರಾಮಭಕ್ತಳು. ಪ್ರತಿದಿನ ಆಲಯದ ಆವರಣದಲ್ಲಿ ಕಾಣಿಸುತ್ತಿದ್ದಳು. ಆಗಾಗ



ಗುಡಿಯ ಆವರಣವನ್ನು ಗುಡಿಸುವುದುಂಟು. ಗಿಡಗಳಿಗೆ ನೀರು ಹಾಕುತ್ತಿದ್ದಳು.

ಆ ಮುದುಕಿ ಸತ್ಯಪಾಲನನ್ನು ಸಮೀಪಿಸಿ "ವತ್ಸಾ, ದೇವರು ಮಾತನಾಡುವುದಿಲ್ಲವೇ?" ಎಂದು ಕೇಳಿದಳು.

"ಇಲ್ಲ ತಾಯಿ, ಏನು ಮಾಡಬೇಕೋ ನನಗೆ ತೋಚುತ್ತಿಲ್ಲ" ಎಂದು ಸತ್ಯಪಾಲ ನಿಟ್ಟುಸಿರಿಟ್ಟನು.

"ಹುಂಡಿಯಿಂದ ನೂರು ರೂಪಾಯಿ ತೆಗೆದುಕೊಟ್ಟರೆ ದೇವರು ಮಾತನಾಡುವ ಮಾರ್ಗ ತಿಳಿಸುವೆನು" ಎಂದಳು ಮುದುಕಿ.

ಅವಳ ಮಾತು ಕೇಳಿ ಸತ್ಯಪಾಲನು ಗಂಟು ಮೋರೆಹಾಕಿ, "ಛಿ, ಮುದಿದೆವ್ವ, ನೀನೊಬ್ಬ ಭಕ್ತಳೆಂದು ಭಾವಿಸಿದ್ದೆ. ಲಂಚ ಪಡೆದು

ಭಗವಂತನ ಅನುಗ್ರಹ ಪಡೆಯುವೆಯಾ? ತೊಲಗಾಚೆ" ಎಂದು ಗದರಿಕೊಂಡ.

ಮುದುಕಿ ಕೋಪಿಸಿಕೊಳ್ಳದೆ ನಗುತ್ತಲೇ ಹೊರಟುಹೋದಳು. ಮಾರನೇಯದಿನ ಅದೇ ವೇಳೆಗೆ ಸತ್ಯಪಾಲನ ಹತ್ತಿರಬಂದು "ಇನ್ನೂರು ರೂಪಾಯಿ ಕೊಡು. ದೇವರು ಮಾತನಾಡುವ ರೀತಿಯನ್ನು ತಿಳಿಸುವೆನು. ನಿಷ್ಕಾರಣವಾಗಿ ಕೆಡಬೇಡ" ಎಂದಳು.

ಸತ್ಯಪಾಲನು ಆಕೆಯನ್ನು ಮನಸ್ವೀ ಬಯ್ದು ಅಲ್ಲಿಂದ ಹೊರಗೆ ಧಬ್ಬಿದನು. ಅವನಿಗೆ ಆ ಮೇಲೆ ಒಂದು ಸಂದೇಹ ಬಂತು. ಭಗವಂತನೇ ತನ್ನನ್ನು ಈ ರೀತಿ ಪರೀಕ್ಷಿಸುತ್ತಿರಬಹುದು. ಈ ಮುದುಕಿಗೆ ಲಂಚ ಕೊಡುವುದು ದೇವರದೃಷ್ಟಿಯಲ್ಲಿ ತಪ್ಪಾಗಿರಲಾರದು. ಒಂದಾವರ್ತಿ ಈ ವಿಧವಾಗಿ ಅನುಮಾನ ಬಂದ ಕೂಡಲೇ, ಮಾರನೇಯದಿವಸ ಅಲ್ಲಿಗೆ ಮುದುಕಿ ಬರಲು "ಅಜ್ಜೀ, ನೀನು ಏನು ಕೇಳಿದರೆ ಅದನ್ನು ಕೊಡುತ್ತೇನೆ. ದೇವರು ಮಾತನಾಡಬೇಕೆಂದರೆ ಏನು ಮಾಡಬೇಕು, ಹೇಳು" ಎಂದು ಗದ್ಗದ ಕಂಠದಿಂದ ಕೇಳಿದನು.

"ಹುಂಡಿಯಿಂದ ಮುನ್ನೂರು ರೂಪಾಯಿ ತೆಗೆದು ಕೊಡು!" ಎಂದು ಕೇಳಿದಳು ಮುದುಕಿ. ಸತ್ಯಪಾಲನು ಹಣವನ್ನು ಆಕೆಯ ಕೈಗಿತ್ತು "ನಾನೀಗ ಏನು ಮಾಡಬೇಕು" ಎಂದನು ಕಾತುರ ಸ್ವರದಲ್ಲಿ.

"ಮೂರ್ಖ, ನಿನಗೆ ಇನ್ನೂ ಗಡ್ಡ ಮೀಸೆಗಳು ಬೆಳೆದಿಲ್ಲ. ಅಂತೆಯೇ ಪ್ರಪಂಚಜ್ಞಾನ ಸಹ ಬೆಳೆದಿಲ್ಲ. ಇಷ್ಟುದಿನ ಭವಿಷ್ಯನುಡಿಯು



ತ್ತಿದ್ದವರು ಯಾರೆಂದು ತಿಳಿದಿದ್ದೆ. ನಾನೇ ಹೇಳುತ್ತಿದ್ದೆ. ನಾನೂ ಮತ್ತು ಆಂಜನೇಯ ಸ್ವಾಮಿ ಕಲೆತು ಭಕ್ತಾಧಿಗಳಿಗೆ ಸಂದರ್ಭೋಚಿತವಾಗಿ ಉತ್ತರ ಕಲ್ಪಿಸಿ ಹೇಳುತ್ತಿದ್ದೆವು. ವಿಗ್ರಹದ ಹಿಂದೆ ನೆಲಮಾಳಿಗೆಯೊಂದಿದೆ. ಅಲ್ಲಿಂದ ನಾನು ಮಾತನಾಡುತ್ತಿದ್ದೆ. ನನ್ನನ್ನು ಸರಿಯಾಗಿ ಗಮನಿಸಿದರೆ ನಿನಗೂ ಸಹಾಯ ಮಾಡುವೆನು" ಎಂದು ಹೇಳಿದಳು ಆ ವಯೋವೃದ್ಧೆ.

ಸತ್ಯಪಾಲನ ಹೃದಯಕ್ರಿಯೆ ನಿಂತಂತಾಯಿತು. "ನಿನ್ನಿಂದ ನನಗೆ ಯಾವ ಸಹಾಯವೂ ಅಗತ್ಯವಿಲ್ಲ, ನಡಿ, ನನ್ನ ಮುಂದೆ ನಿಲ್ಲಬೇಡ" ಎಂದು ಮುದುಕಿಯನ್ನು ಅಲ್ಲಿಂದ ಕಳುಹಿಸಿಬಿಟ್ಟು, ಸತ್ಯಪಾಲನು ಆಗಿಂದಾಗಲೇ ಗುಡಿಯಿಂದ ಹೊರಬಿದ್ದು, ಎತ್ತಲೋ ಮಾಯವಾದನು. ಮುದುಕಿ ಹೇಳಿದ ಮಾತನ್ನು ಕೇಳಿ ಅವನಿಗೆ ದೇವರಲ್ಲೂ, ಪ್ರಜೆಗಳನ್ನು ವಂಚಿಸುವ ಪೂಜಾರಿಗಳಲ್ಲೂ, ಆಲಯಗಳಲ್ಲೂ ಜಿಗುಪ್ಸೆ ಜನಿಸಿತು.

ಅವನು ಭದ್ರಾವತಿ ನಗರದಲ್ಲಿ ಯಾರೊಂದಿಗೂ ಹೇಳದೆ, ದೇಶಸಂಚಾರ ಮಾಡಲು ಹೊರಟುಬಿಟ್ಟನು. ಬಿಕ್ಷೆ ಬೇಡುತ್ತಾ ಕೂಲಿನಾಲಿ ಮಾಡುತ್ತಾ ಹೊಟ್ಟೆಹೊರೆದುಕೊಳ್ಳುತ್ತಿದ್ದನು. ಈ ವಿಧವಾಗಿ ಅವನು ಹಲವಾರು ಮಾಸಗಳು ದೇಶಸಂಚಾರ ಮಾಡಿದನು. ಆದರೆ ಭದ್ರಾವತಿ ಬಿಟ್ಟನಂತರ ಅವನು ಯಾವ ಆಲಯದಲ್ಲೂ ಅಡಿಯಿಡಲಿಲ್ಲ. ಒಂದುಬಾರಿ ಯಾದರೂ ದೇವರನ್ನು ಸ್ಮರಿಸಲಿಲ್ಲ.






ಒಂದುದಿನ ಕತ್ತಲೆಯರಾತ್ರಿ ಸತ್ಯಪಾಲನು ಒಂದು ಗ್ರಾಮದ ಸತ್ರಕ್ಕೆ ಹೋದನು. ಅವನು ಜಗಲಿಯಮೇಲೆ ವಿಶ್ರಾಂತಿ ಪಡೆಯುತ್ತಿರಲು ಸಮೀಪದಲ್ಲಿದ್ದ ಕೆಲವರು ಭದ್ರಾವತಿಯ ರಾಮಮೂರ್ತಿಯ ಮಹಿಮೆಯನ್ನು ಕುರಿತು ಕೊಂಡಾಡುತ್ತಿರುವುದು ಅವನ ಕಿವಿಗೆಬಿತ್ತು.

ವಿಸ್ಮಯಗೊಂಡ ಸತ್ಯಪಾಲನು ಅವರನ್ನು ಸಮೀಪಿಸಿ "ಅಯ್ಯಾ, ಭದ್ರಾವತಿಯ ರಾಮ ಚಂದ್ರಮೂರ್ತಿಯಲ್ಲಿ ನಿಜವಾಗಿಯೂ ನೀವು ಹೇಳುವ ಮಹಿಮೆಯಿದೆಯೇ?" ಎಂದು ಕಾತುರದಿಂದ ಕೇಳಿದನು.

"ಅದೇನು ಹಾಗೆ ಕೇಳುವಿರಿ? ರಾಮ ದೇವರ ಮಹಿಮೆ ತಿಳಿಯದವರೂ ಈ ಲೋಕ ದಲ್ಲಿರುವರೇ? ಹೊಸ ಪೂಜಾರಿ ಬಂದ ಮೇಲಂತೂ ಸ್ವಾಮಿಯ ಮಹಿಮೆ ಮತ್ತಷ್ಟು ಹೆಚ್ಚಾಯಿತು. ಆತನು ಬಂದ ಹೊಸದರಲ್ಲೇ ಆಲಯದಲ್ಲಿದ್ದ ಮುದುಕಿಯ ಗಂಟಲಿಗೆ ರೂಪಾಯಿ ಸಿಕ್ಕಿಕೊಂಡು ಸಾಯುವಳೆಂದು ದೇವರು ನುಡಿದನು. ಅಂತೆಯೇ ಆಯಿತು." ಎಂದ ಅವರಲ್ಲೊಬ್ಬ.

"ಹಾಗಾದರೆ ಈಗ ಆ ಆಲಯದಲ್ಲಿರುವ ಪೂಜಾರಿ ಯಾರು?" ಎಂದು ಕುತೂಹಲ ದಿಂದ ಕೇಳಿದ ಸತ್ಯಪಾಲ.

"ಇನ್ನೂ ತರುಣ. ಹೆಸರು ಸತ್ಯಪಾಲ. ಆತನ ಮುಖದಲ್ಲಿ ಎಂಥ ತೇಜಸ್ಸಿದೆಯಂ ತೀರಿ" ಎಂದು ಪ್ರಯಾಣಿಕರು ಅರ್ಚಕನನ್ನು ಮೆಚ್ಚಿಕೊಂಡರು.

"ಏನು! ಸತ್ಯಪಾಲನೇ! ನನ್ನ ಹೆಸರೂ ಸಹ ಅದೇ!" ಎಂದ ಸತ್ಯಪಾಲ ಬೆರಗಾಗಿ.

ಮುಸಕು ಕತ್ತಲೆಯಲ್ಲಿ ಪ್ರಯಾಣಿಕರು ಸತ್ಯಪಾಲನನ್ನು ಚೆನ್ನಾಗಿ ದಿಟ್ಟಿಸಿ ನೋಡಿ "ಏನಿದು ಆಶ್ಚರ್ಯ? ಆ ಮನುಷ್ಯನ ಹೆಸ ರೊಂದೇ ಅಲ್ಲ, ಎಲ್ಲವಿಧದಲ್ಲೂ ಆತನನ್ನೇ ಹೋಲುತ್ತಿರುವೆ!" ಎಂದರು ವಿಸ್ಮಯದಿಂದ.

ತಾನು ದೇವಾಲಯವನ್ನು ಬಿಟ್ಟು ಬಂದ ನಂತರ ತನ್ನನ್ನು ಹೋಲುವಾತನು ತನ್ನ ಹೆಸರಿನಿಂದ ಅರ್ಚಕನಾಗಿರುವುದನ್ನೂ ರಾಮ ಮೂರ್ತಿ ಭಕ್ತರ ಸಂದೇಹ ನಿವಾರಣೆ ಮಾಡುವ ವಿಷಯವನ್ನೂ ಕೇಳಿ ಸತ್ಯಪಾಲನು "ಇದರಲ್ಲೇನೋ ಮೋಸವಿರಬೇಕು. ಇಲ್ಲ ದಿದ್ದರೆ ಸ್ವಾಮಿಯ ಮಹಿಮೆಯಾದರೂ ಇರ

ಬೇಕು" ಎಂದು ಅಂದುಕೊಂಡನು. ಮೂರನೇಯ ದಿನವೇ ಅವನು ಭದ್ರಾವತಿಗೆ ಹೋಗಿ, ರಾಮದೇವಾಲಯುವನ್ನು ಸಮೀಪಿಸಿದನು. ಆಲಯುದಬಳಿ ಜನ ಕಿಕ್ಕಿರಿದು ನೆರೆದಿತ್ತು. ಅವರನ್ನು ತಳ್ಳಿಕೊಂಡು ಸತ್ಯಪಾಲನು ಆಲಯುವನ್ನು ಪ್ರವೇಶಿಸಿದನು. ಅವನನ್ನು ನೋಡಿದ ಜನ "ಅರ್ಚಕರು, ಅರ್ಚಕರು, ದಾರಿ ಬಿಡಿ" ಎಂದು ಸತ್ಯಪಾಲನಿಗೆ ಹೋಗಲು ದಾರಿ ಬಿಟ್ಟುಕೊಟ್ಟರು.

ಆಲಯುದಲ್ಲಿ ತನ್ನನ್ನೇ ಹೋಲುವ ವ್ಯಕ್ತಿ ಅರ್ಚಕನ ಕೆಲಸ ಕಾರ್ಯಗಳಲ್ಲಿ ತೊಡಗಿರುವುದನ್ನು ಸತ್ಯಪಾಲನು ಕಂಡನು. ಆ ಅರ್ಚಕನು ತನ್ನನ್ನು ಹತ್ತಿರಕ್ಕೆ ಬರುವಂತೆ ಸನ್ನೆ ಮಾಡುತ್ತಿರುವುದನ್ನು ಕಂಡು ಸತ್ಯಪಾಲನು ಆತನ ಸಮೀಪವನ್ನು ಸೇರಿದನು. "ಯಾರೋ ವಂಚಕಳು ನನ್ನ ಹೆಸರಿನಲ್ಲಿ ಪ್ರಜೆಗಳನ್ನು ಮೋಸಮಾಡುತ್ತಿರುವಳೆಂದು ಕೊಂಡು, ನನ್ನಲ್ಲಿ ನಂಬಿಕೆ ತೊರೆದು ನೀನು ಹೊರಟುಹೋಗುವುದು ಸರಿಯೇ? ನೋಡು, ನಿನ್ನ ಕೆಲಸ ನಾನು ಮಾಡಬೇಕಾಗಿ ಬಂತು" ಎಂದ ಅರ್ಚಕ.

ತನ್ನೊಂದಿಗೆ ಮಾತನಾಡುತ್ತಿರುವುದು ಶ್ರೀರಾಮನೆಂದು ಸತ್ಯಪಾಲನು ಕೂಡಲೇ ಗ್ರಹಿಸಿದನು. "ನನ್ನ ಅಪಚಾರ ಕ್ಷಮಿಸು ದೇವಾ! ಇನ್ನುಮೇಲೆ ನಾನು ಎಡೆಬಿಡದೆ ನಿನ್ನಸೇವೆ ಮಾಡುವೆನು" ಎಂದು ದೈನ್ಯದಿಂದ ಕೇಳಿಕೊಂಡ ಸತ್ಯಪಾಲ. "ನನಗೆ ನಿನ್ನ ಸೇವೆಯ ಅಗತ್ಯವಿಲ್ಲ. ನನ್ನಲ್ಲಿ



ನಂಬಿಕೆಯಿಟ್ಟು ಪ್ರಜಾಸೇವೆ ಮಾಡು" ಎಂದು ಹೇಳಿ ಪೂಜಾರಿ ಒಂದುಸಾರಿ ದೇದೀಪ್ಯಮಾನನಾಗಿ ಬೆಳಗಿ ಅದೃಶ್ಯನಾದನು. ಸತ್ಯಪಾಲನು ಮಾತ್ರ ದೇಶ ಸಂಚಾರಮಾಡಲು ಹೊರಟುಬಿಟ್ಟನು. ಆ ತರುವಾಯ ಆ ಆಲಯದಲ್ಲಿ ದೇವರ ಸ್ವರವನ್ನು ಕೇಳಿದವರಿಲ್ಲ. ಆಲಯವನ್ನು ಕುರಿತು ಪ್ರಜೆಗಳು ಪ್ರಸ್ತಾಪಿಸುವುದೂ ವಿರಳವಾಯಿತು. ಕಾಲಕ್ರಮೇಣದಲ್ಲಿ ಭದ್ರಾವತಿಯ ರಾಮದೇವಾಲಯವು ಶಿಥಿಲವಾಯಿತು.

ಬೇತಾಳ ಈ ಕಥೆಯನ್ನು ಹೇಳಿ "ರಾಜನೇ, ನನಗೊಂದು ಸಂದೇಹ. ಸತ್ಯಪಾಲನು ತನ್ನ ಪೂಜೆ ಮಾಡಲು ಸಿದ್ಧನಿರಲು ಶ್ರೀರಾಮಮೂರ್ತಿ ಏಕೆ ಒಪ್ಪಿಕೊಳ್ಳಲಿಲ್ಲ? ತನ್ನಲ್ಲಿ ವಿಶ್ವಾಸವನ್ನು ಕಳೆದುಕೊಂಡನೆಂಬ ಕೋಪದಿಂದಲೇ? ಭದ್ರಾವತಿಯ ರಾಮಾಲಯವು ತನ್ನ ಮಹಿಮೆಯನ್ನು ಕಳೆದುಕೊಳ್ಳಲು ಕಾರಣರು ಯಾರು? ಸತ್ಯಪಾಲನೇ? ಇಲ್ಲ, ಆಲಯದಲ್ಲಿ ಅರ್ಚನೆಪಡೆದ ರಾಮನೇ? ಈ ಸಂದೇಹಗಳಿಗೆ ಸಮಾಧಾನ ತಿಳಿದೂ ಸಹ ನಿಜ ಹೇಳದಿದ್ದರೆ ನಿನ್ನ ತಲೆ ಸಾವಿರ ಹೋಳುಗಳಾದೀತು, ಎಚ್ಚರಿಕೆ" ಎಂದಿತು.

ಅದಕ್ಕೆ ತ್ರಿವಿಕ್ರಮನು "ಸತ್ಯಪಾಲನು ತನ್ನಲ್ಲಿ ವಿಶ್ವಾಸ ಕಳೆದುಕೊಂಡನಾದುದರಿಂದ ಶ್ರೀರಾಮನು ಅವನಮೇಲೆ ಆಗ್ರಹ ಹೊಂದಿದನೆಂದು ಹೇಳುವುದು ತಪ್ಪು. ಹಾಗಿದ್ದರೆ ತನ್ನ ಭಕ್ತನ ರೂಪದಲ್ಲಿ ಅರ್ಚಕನ ಕೆಲಸಮಾಡಿ ತನ್ನ ಮಹಿಮೆಯನ್ನು ಜನರ ಮೇಲೆ ಬೀರುತ್ತಿರಲಿಲ್ಲ. ಅದಕ್ಕೆ ಕಾರಣ ಆ ಆಲಯದಲ್ಲಾದ ಮಹಿಮೆಗಳೆಲ್ಲಾ ಮೋಸ ಮತ್ತು ಕುಟಿಲತೆಯಿಂದ ಕೂಡಿದ್ದುವು. ಭಗವಂತನು ತನ್ನ ನಿಜವಾದ ಮಹಿಮೆಯನ್ನು ಪ್ರದರ್ಶಿಸಿದುದು ಕೇವಲ ತನ್ನ ಭಕ್ತ ಸತ್ಯಪಾಲನಿಗಾಗಿಮಾತ್ರ. ಆದುದರಿಂದ ಆ ಆಲಯದ ಮಹಿಮೆ ಕೊನೆಗೊಂಡುದು ಸತ್ಯಪಾಲನ ತಪ್ಪೂ ಅಲ್ಲ, ದೇವರ ತಪ್ಪಂತೂ ಅಲ್ಲವೇ ಅಲ್ಲ" ಎಂದ.

ರಾಜನಿಗೆ ಈ ರೀತಿ ಮೌನಭಂಗವಾದ ಕೂಡಲೇ ಬೇತಾಳ ಶವದೊಂದಿಗೆ ಮಾಯವಾಗಿ ಮರವನ್ನೇರಿತು.






## 10

[ರಾಜಕುಮಾರಿಯ ಅಜ್ಞಾನದಿಂದ ಅದ್ಭುತ ದೀಪವನ್ನು ಕಳೆದುಕೊಂಡ ಅಲ್ಲಾದೀನ್ ತನ್ನ ಉಂಗುರದ ಭೂತದ ಸಹಾಯದಿಂದ ಮೊರಾಕೊ ದೇಶದಲ್ಲಿದ್ದ ತನ್ನ ಮಡದಿಯನ್ನು ಸೇರಿ, ಮಾಯೋಪಾಯದಿಂದ ಮಾಂತ್ರಿಕನನ್ನು ಹತಗೊಳಿಸಿ, ತನ್ನ ಭಾರ್ಯೆ ಮತ್ತು ಭವನವನ್ನು ಸ್ವಾಧೀನಪಡಿಸಿಕೊಂಡು ರಾಜನ ಮನ್ನಣೆಗೆ ಪಾತ್ರನಾಗಿ ಸುಖವಾಗಿ ಜೀವಿಸುತ್ತಿದ್ದನು. ಅವನ ಕಷ್ಟಗಳೆಲ್ಲ ತೀರಿದಂತೆ ತೋರಿತು. ಆದರೆ—]

**ಕೆ**ಲವಾರು ತಿಂಗಳು ಕಳೆದುವು. ಒಂದು ದಿನ ಅಲ್ಲಾದೀನ್ ತನ್ನ ಭವನದ ಕಿಟಕಿಯಬಳಿ ನಿಂತು ತೋಟದ ಸೊಬಗನ್ನು ನೋಡುತ್ತಿರಲು ಅವನ ಪತ್ನಿ ಅಲ್ಲಿಗೆ ಬಂದಳು. ಮೆಲ್ಲನೆ ಅವನ ಪಕ್ಕದಲ್ಲಿ ನಿಂತು "ಭಗವಂತನ ಅನುಗ್ರಹದಿಂದ ನಮಗೆ ಯಾವ ಕೊರತೆಯಿಲ್ಲದಿದ್ದರೂ ಮಕ್ಕಳಿಲ್ಲವೆಂಬ ಚಿಂತೆ ನನ್ನನ್ನು ಕಾಡುತ್ತಿದೆ. ನಮ್ಮ ನಗರಕ್ಕೆ ಫಾತಿಮಾ ಎಂಬ ಯೋಗಿನಿ ಬಂದಿರುವಳಂತೆ. ಆಕೆ ತಾಕಿದಮಾತ್ರಕ್ಕೆ ಎಂಥ ಬಂಜೆಗಾದರೂ ಮಕ್ಕಳಾಗುವುದಂತೆ. ಆ ಯೋಗಿನಿಯನ್ನು ನಾನು ಒಮ್ಮೆ ನಮ್ಮ ಮನೆಗೆ ಕರೆಯಿಸಲೇ?" ಎಂದು ಕೇಳಿದಳು.

ಅಲ್ಲಾದೀನ್ ಈ ಸಲಹೆಗೆ ಸಮ್ಮತಿಸಿದನು. ಆ ಯೋಗಿನಿಯನ್ನು ಕೂಡಲೇ ಕರೆತರಲು ನಾಲ್ವರು ಭಟರನ್ನು ಕಳುಹಿಸಿದನು. ಯೋಗಿನಿ ಬಂದಳು. ಆಕೆ ಮುಖಕ್ಕೆ ಮುಸುಕು ಹಾಕಿಕೊಂಡಿದ್ದಳು. ಆಕೆಯ ಕೊರಳಲ್ಲಿ ರುದ್ರಾಕ್ಷಿಮಾಲೆಯಿತ್ತು. ರಾಜಕುಮಾರಿ ಯೋಗಿನಿಯನ್ನು ಎದುರುಗೊಂಡು

ಎಸ್. ಪ್ರತಿಭಾಕುಮಾರಿ



ಅತಿವಿನಯದಿಂದ ನಮಸ್ಕರಿಸಿದಳು. ಯೋಗಿನಿ ಆವಳಿಗೆ ಆಶೀರ್ವಾದಮಾಡಿದಳು. ರಾಜಕುಮಾರಿ ಯೋಗಿನಿಯನ್ನು ಉಚಿತಾಸನದಲ್ಲಿ ಕೂರಿಸಿ "ಅಮ್ಮಾ ನಿಮ್ಮ ಆಶೀರ್ವಾದ ಸಟಿಯಾಗಲಾರದು. ಯಾಕೆಂದರೆ ನಿಮ್ಮಂತಹ ಭಕ್ತರ ಮಾತುಗಳನ್ನು ಭಗವಂತನು ಲಾಲಿಸುತ್ತಾನೆ. ನನ್ನದೊಂದು ಚಿಕ್ಕ ಕೋರಿಕೆಯಿದೆ. ನನಗೆ ಸಂತಾನಪ್ರಾಪ್ತಿಯಾಗಬೇಕು. ನಾನೇನು ಮಾಡಬೇಕೋ ತಿಳಿಸಿ. ಏನು ಮಾಡಲೂ ಸಿದ್ಧಳಿರುವೆನು. ನನಗೆ ಈ ಉಪಕಾರವನ್ನು ಮಾಡಿದರೆ ನಿಮಗೆ ನಾನು ಅನೇಕ ಬಹುಮಾನಗಳನ್ನು ಕೊಡುತ್ತೇನೆ. ಅವುಗಳಿಂದ ನಿಮಗೆ ಅಗತ್ಯವಿಲ್ಲದಿರಬಹುದು. ಆದರೂ ಅವನ್ನು ನಿಮ್ಮ ಆದರಣೆಗೆ ಪಾತ್ರರಾದ ಬಡಬಗ್ಗರಿಗೆ ದಾನ ಮಾಡಬಹುದಲ್ಲ" ಎಂದಳು.

ರಾಜಕುಮಾರಿಯ ಮಾತುಗಳನ್ನು ಕೇಳಿ ಯೋಗಿನಿಯ ಕಣ್ಣುಗಳು ಒಂದೇ ರೀತಿ ವಿಕೃತಕಾಂತಿಯಿಂದ ಬೆಳಗಿದುವು. ಆಕೆಯ ದೇಹದಲ್ಲಿ ಯಾವುದೋ ಆನಂದ ಉಕ್ಕಿಬರುವಂತೆ ತೋರಿತು. ಆಕೆ ತನ್ನ ಆನಂದವನ್ನು ಬಯಲುಮಾಡದೆ, ರಾಜಕುಮಾರಿಯ ತಲೆ ನೇವರಿಸುತ್ತಾ ದೇವರನ್ನು ಪ್ರಾರ್ಥಿಸುವಂತೆ ನಟಿಸಿದಳು. ಅನಂತರ "ರಾಜಕುಮಾರಿ, ಭಗವಂತನ ಕೃಪೆಯಿಂದ ನಿನಗೆ ಸಂತಾನ ಪ್ರಾಪ್ತಿಯಾಗುವುದು. ಆದರೆ ನೀನೊಂದು ಕಾರ್ಯ ಸಾಧಿಸಬೇಕಾಗಿದೆ. ಅದು ನಿನ್ನಿಂದ ಸಾಧ್ಯವಿಲ್ಲವೇನೋ ಎಂದು ನನಗೆ ಸಂದೇಹ ಉಂಟಾಗಿದೆ" ಎಂದಳು.

ರಾಜಕುಮಾರಿ ಯೋಗಿನಿಯ ಪಾದಗಳಿಗೆರಗಿ "ತಾಯೀ, ನನ್ನ ಪತಿ ಅಲ್ಲಾದೀನನಿಗೆ ಅಸಾಧ್ಯವಾದ ಕಾರ್ಯ ಯಾವುದೂ ಇಲ್ಲ. ನಾನು ಮಾಡಬೇಕಾದ ಕರ್ತವ್ಯವೇನೋ ತಿಳಿಸಿ. ಇಲ್ಲದಿದ್ದರೆ ನಿಮ್ಮ ಪಾದಗಳಬಳಿ ನನ್ನ ಪ್ರಾಣವನ್ನು ನೀಗುತ್ತೇನೆ" ಎಂದಳು.

ಯೋಗಿನಿ ತುಸಹೊತ್ತು ಯೋಚಿಸಿ ಹೀಗೆಂದಳು "ಮಗಳೇ, ನಿನಗೆ ಸಂತಾನ ಪ್ರಾಪ್ತಿಯಾಗಬೇಕೆಂಬ ಬಯಕೆಯಿದ್ದರೆ ಒಂದೇ ಒಂದು ಮಾರ್ಗವುಂಟು. ಕಾಕಸಸ್ ಪರ್ವತಶಿಖರದಲ್ಲಿರುವ ಗಂಡಭೇರುಂಡ ಪಕ್ಷಿಯ ಮೊಟ್ಟೆಯನ್ನು ತಂದು ನಿಮ

ಮನೆಯಲ್ಲಿ ತೂಗುಹಾಕಿಸಬೇಕು. ನೀನು ಪ್ರತಿದಿನಾ ಅದನ್ನು ನೋಡುತ್ತಿದ್ದರೆ ನಿನಗೆ ಗರ್ಭಧಾರಣೆಯಾಗಿ ಮಕ್ಕಳಾಗುವರು."

"ಅಮ್ಮಾ, ನನಗೆ ಗಂಡಭೇರುಂಡ ಪಕ್ಷಿಯಾಗಲೀ, ಅದರ ಮೊಟ್ಟೆಯು ವಿಷಯವಾಗಲೀ ತಿಳಿಯದು. ಈ ಪ್ರಪಂಚದಲ್ಲಿ ಎಲ್ಲಿದ್ದರೂ ಅದನ್ನು ನನ್ನ ಗಂಡ ತರಬಲ್ಲನೆಂದು ನನಗೆ ಸಂಪೂರ್ಣ ನಂಬಿಕೆಯಿದೆ. ಅವರು ಅನೇಕ ಅದ್ಭುತ ಕಾರ್ಯಗಳನ್ನು ಮಾಡಬಲ್ಲರು" ಎಂದಳು ರಾಜಕುಮಾರಿ.

ಯೋಗಿನಿ ಹೊರಡಲು ಸಿದ್ಧಳಾದಳು. ಅಂದು ತನ್ನ ಮನೆಯಲ್ಲಿ ಆತಿಥ್ಯ ಸ್ವೀಕರಿಸಬೇಕೆಂದು ರಾಜಕುಮಾರಿ ಆಕೆಯನ್ನು ಪ್ರಾರ್ಥಿಸಿದಳು. ಆದರೆ ಯೋಗಿನಿ ಒಪ್ಪಿಕೊಳ್ಳಲಿಲ್ಲ. "ಇನ್ನೂ ಅನೇಕ ನಿರ್ಭಾಗ್ಯರು ನನಗಾಗಿ ಕಾದುಕೊಂಡಿರುತ್ತಾರೆ. ಅವರ, ಕೋರಿಕೆಗಳನ್ನು ನೆರವೇರಿಸಬೇಡವೇ? ಅವರ ಕಷ್ಟಗಳನ್ನು ಪರಿಹಾರ ಮಾಡಬೇಡವೇ? ದೇವರ ಅನುಗ್ರಹವಿದ್ದರೆ ನಾಳೆ ಬಂದು ನಿನ್ನ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುತ್ತೇನೆ" ಎಂದು ಲಗುಬಗನೆ ಅಲ್ಲಿಂದ ಹೊರಟುಬಿಟ್ಟಳು.

ಆಕೆ ಹೊರಟುಹೋದ ಕೊಂಚ ಹೊತ್ತಿಗೆ ಅಲ್ಲಾದೀನ್ ಅಂತಃಪುರಕ್ಕೆ ಬಂದನು. ತನ್ನ ಹೆಂಡತಿ ಖಿನ್ನಳಾಗಿರುವುದನ್ನು ಕಂಡು "ಪ್ರಿಯೆ, ವ್ಯಾಕುಲಚಿತ್ತಳಾಗಿರುವಂತೆ ತೋರುವುದಲ್ಲಾ, ಕಾರಣವೇನು?" ಎಂದು ಕೇಳಿದನು. ಅವನ ಕಂಠಸ್ವರ ಕಂಪಿಸುತಿತ್ತು.



"ಕಾಕಸಸ್ ಪರ್ವತ ಶಿಖರದಲ್ಲಿರುವ ಗಂಡಭೇರುಂಡ ಪಕ್ಷಿಯ ಮೊಟ್ಟೆಯನ್ನು ತರಿಸಿಕೊಡಿ. ಇಲ್ಲವಾದರೆ ನನ್ನ ಪ್ರಾಣ ಉಳಿಯುವುದಿಲ್ಲ" ಎಂದಳು ರಾಜಕುಮಾರಿ.

ಅಲ್ಲಾದೀನ್ ಅಲಕ್ಷ್ಯವಾಗಿ ನಗುತ್ತಾ "ಹುಚ್ಚಳೀ, ನಿನ್ನಪ್ರಾಣ ಅಷ್ಟು ಸುಲಭವಾಗಿ ಉಳಿಯುವಂತಿದ್ದರೆ ನೀನು ಗಾಬರಿಪಡಲವಶ್ಯಕವಿಲ್ಲ. ಆ ಮೊಟ್ಟೆಯನ್ನು ಕೂಡಲೇ ತರಿಸಿ ಕೊಡುತ್ತೇನೆ. ಆದರಿಂದ ಆಗುವ ಉಪಯೋಗವಾದರೂ ಏನೆಂದು ಹೇಳು?" ಎಂದು ಕೇಳಿದನು.

"ಅದನ್ನು ನಮ್ಮ ಬುರುಜಿನಲ್ಲಿ ತೂಗಹಾಕಿ, ಪ್ರತಿದಿನಾ ನೋಡುತ್ತಿರುವಂತೆ ಯೋಗಿನಿ ಹೇಳಿದಳು. ಹಾಗೆ ಮಾಡಿದ ಪಕ್ಷಕ್ಕೆ ನನಗೆ

ಸಂತಾನ ಪ್ರಾಪ್ತಿಯಾಗುವುದಂತೆ" ಎಂದು ಹೇಳಿದಳು ರಾಜಕುಮಾರಿ.

"ಸರಿ, ಈಗಲೇ ತರಿಸಿಕೊಡುತ್ತೇನೆ. ಚಿಂತಿಸದಿರು" ಎಂದ ಅಲ್ಲಾದೀನ್.

ಅವನು ತನ್ನ ಕೋಣೆಗೆ ಹೋಗಿ ಅದ್ಭುತ ದೀಪವನ್ನು ಹೊರಗೆ ತೆಗೆದು ಉಜ್ಜಿದನು. ಕೂಡಲೇ "ಏನಪ್ಪಣೆ" ಎಂದು ಭೂತ ಪ್ರತ್ಯಕ್ಷವಾಯಿತು.

"ಎಲೈ, ಭೂತವೇ, ಕಾಕಸಸ್ ಪರ್ವತ ಶಿಖರದಲ್ಲಿರುವ ಗಂಡಭೇರುಂಡ ಪಕ್ಷಿಯ ಮೊಟ್ಟೆಯನ್ನು ಕೂಡಲೇ ತಂದುಕೊಡು" ಎಂದ ಅಲ್ಲಾದೀನ್.

ಈ ಮಾತುಗಳು ಅಲ್ಲಾದೀನನ ಬಾಯಿಂದ ಹೊರಬಿದ್ದ ಕೂಡಲೇ ದೀಪದಭೂತ ರೌದ್ರಾಕಾರತಾಳಿ ಭವನವೆಲ್ಲಾ ಅದರುವಂತೆ ಅಬ್ಬರಿಸಿ "ಮೂರ್ಖ, ನೀಚ, ನೀನು ಕೇಳುತ್ತಿರುವುದಾದರೂ ಏನು? ನಮ್ಮ ಭೂತ ರಾಜನಾದ ಗಂಡಭೇರುಂಡ ಪಕ್ಷಿಯ ಸಂತಾನವನ್ನು ಆಶಿಸುವೆಯಾ? ಆ ಉಂಗುರ ನಿನ್ನನ್ನು ರಕ್ಷಿಸುತ್ತಿದೆ. ಇಲ್ಲದಿದ್ದರೆ ಈಗಲೇ ನಾನು ನಿನ್ನನ್ನು ಭಸ್ಮ ಮಾಡುತ್ತಿದ್ದೆ" ಎಂದಿತು.

ಅಲ್ಲಾದೀನ್ ಗಾಬರಿಗೊಂಡು "ಭೂತವೇ, ನನ್ನಮೇಲೆ ಆಗ್ರಹಗೊಳ್ಳದಿರು. ನನಗೆ ಯಾವ ನೀಚ ಉದ್ದೇಶವೂ ಇಲ್ಲ. ಒಬ್ಬಾನೊಬ್ಬ ಯೋಗಿನಿಯ ಸಲಹೆಯಪ್ರಕಾರ ನನ್ನ ಮಡದಿ ಸಂತಾನಾಪೇಕ್ಷೆಯಿಂದ ಆ ಮೊಟ್ಟೆಯನ್ನು ತಂದುಕೊಡುವಂತೆ ಬೇಡಿ



ದಳು. ಆದುದರಿಂದ ನಮ್ಮಮೇಲೆ ವ್ಯರ್ಥವಾಗಿ ಕೋಪಿಸಿಕೊಳ್ಳಬೇಡ" ಎಂದನು.

ಆ ಭೂತವು ಕೂಡಲೇ ಶಾಂತವಾಗಿ "ಎಲೈ, ಅಲ್ಲಾದೀನ್, ಇದು ನಿನ್ನ ಸ್ವಂತ ಕೋರಿಕೆಯಲ್ಲವೆಂದು ತಿಳಿದು ನನಗೆ ಸಂತೋಷವಾಗಿದೆ. ಹಾಗಲ್ಲದಿದ್ದ ಪಕ್ಷಕ್ಕೆ ಈ ವೇಳೆಗೆ ನೀನು, ನಿನ್ನ ಮಡದಿ ಮತ್ತು ನಿನ್ನ ಭವನ ನಾಶವಾಗುತಿತ್ತು. ಸಿದ್ಧಳೆಂದು ಹೇಳಿಕೊಳ್ಳುತ್ತಿರುವ ವ್ಯಕ್ತಿ ಮತ್ತೆ ಯಾರೂ ಅಲ್ಲ, ಮೊರಾಕೊ ದೇಶದ ಮಾಂತ್ರಿಕನ ತಮ್ಮನವನು. ಅವನು ಅಣ್ಣನ ಪ್ರತಿರೂಪ. ಕಪಟ, ದೌರ್ಜನ್ಯಗಳಲ್ಲಿ ಅಣ್ಣನನ್ನೂ ಮೀರಿಸಿದ್ದಾನೆ. ತನ್ನ ಸಹೋದರನು ನಿನ್ನಿಂದ ಹತನಾದನೆಂದು ತಿಳಿದು ಸೇಡು ತೀರಿಸಿಕೊಳ್ಳಲು ಈ

ಉಪಾಯ ಹೂಡಿರುವನು. ಈ ರಹಸ್ಯವನ್ನು ತಿಳಿದ ಮೇಲಾದರೂ ನೀನು ಜಾಗರೂಕ ನಾಗಿರುವುದು ಉತ್ತಮ" ಎಂದು ಹೇಳಿ ಅದೃಶ್ಯವಾಯಿತು.

ಭೂತ ಹೇಳಿದ ವಿಷಯ ಕೇಳಿ ಅಲ್ಲಾದೀನ್ ಹೌಹಾರಿದ. ಅವನು ತಕ್ಷಣ ಹೆಂಡತಿಯ ಬಳಿಗೆ ಹೋಗಿ "ಪ್ರಿಯೇ, ಗಂಡಭೇರುಂಡ ಪಕ್ಷಿಯ ಮೊಟ್ಟೆಯನ್ನು ತರಿಸುವಷ್ಟರಲ್ಲಿ ಆ ಯೋಗಿನಿ ಹೇಳುವುದನ್ನು ನನ್ನ ಕಿವಿಯಾರ ಕೇಳಲಪೇಕ್ಷಿಸುವೆನು. ಆಕೆಯನ್ನೊಮ್ಮೆ ಅಂತಃಪುರಕ್ಕೆ ಬರಮಾಡು. ಆಕೆ ಬಂದಾಗ ನಾನು ತೆರೆಯ ಹಿಂದೆ ಅಡಗಿಕೊಳ್ಳುತ್ತೇನೆ. ಆ ಮೊಟ್ಟೆಯನ್ನು ಯಾವ ರೀತಿ, ಎಲ್ಲಿಡ ಬೇಕೋ ಮತ್ತೊಮ್ಮೆ ಹೇಳುವಂತೆ ಪ್ರಾರ್ಥಿಸು. ಹಿಂದೆ ಹೇಳಿದ ವಿವರಗಳು ಮರೆತುಬಿಟ್ಟೆನೆಂದು ಹೇಳು" ಎಂದನು.

ರಾಜಕುಮಾರಿ ಕೂಡಲೇ ಯೋಗಿನಿಗೆ ಹೇಳಿ ಕಳುಹಿಸಿದಳು. ಆಕೆ ರಾಜಕುಮಾರಿ ಯನ್ನು ಸಮೀಪಿಸುತ್ತಿರಲು ಅಲ್ಲಾದೀನನು ತೆರೆಯ ಮರೆಯಿಂದ ಹೊರಬಿದ್ದು, ಯೋಗಿನಿ ಯನ್ನು ಒಂದು ಪಕ್ಕಕ್ಕೆ ನೂಕಿ, ತನ್ನ ಖಡ್ಗ ದಿಂದ ಆ ಮಾಯಾವಿಯ ತಲೆ ಹಾರಿಸಿದನು.

"ಅಯ್ಯೋ, ಎಂತಹ ಪಾಪಕಾರ್ಯ ಮಾಡಿದಿರಿ" ಎಂದು ಆವೇಶಪೂರಿತಳಾಗಿ ನುಡಿದಳು ರಾಜಕುಮಾರಿ.

ಅಲ್ಲಾದೀನ್ ಕಿರುನಗೆಬೀರುತ್ತಾ, ಯೋಗಿ ನಿಯ ಮುಸುಕನ್ನು ಸರಿಸಿದನು. ಕೆಳಗೆ ಬಿದ್ದಿದ್ದ ವ್ಯಕ್ತಿಗೆ ಮೀಸೆಗಡ್ಡಗಳಿರುವುದನ್ನು ಕಂಡು ರಾಜಕುಮಾರಿ ಭಯಭೀತಳಾದಳು.

ಅಲ್ಲಾದೀನನು ಮಡದಿಯ ಬಳಿ ಸಾರಿ ಆ ವ್ಯಕ್ತಿಯ ವಿಷಯವನ್ನೆಲ್ಲಾ ವಿವರಿಸಿ ಹೇಳಿ ದನು. "ಭಗವಂತನ ಕೃಪೆಯಿಂದ ನಮ್ಮ ವೈರಿಯಕಾಟ ತಪ್ಪಿತು. ಇಂದಿಗೆ ನಮ್ಮ ಕಷ್ಟ ಗಳೆಲ್ಲಾ ಕೊನೆಗೊಂಡವು" ಎಂದನು.

ಅನಂತರ ಅಲ್ಲಾದೀನನಿಗೆ ಬಹುಮಂದಿ ಮಕ್ಕಳಾದರು. ಅಲ್ಲಾದೀನನ ತಾಯಿ, ಹಣ್ಣುಹಣ್ಣು ಮುದುಕಿ, ಅನೇಕ ಜನ ಮೊಮ್ಮಕ್ಕಳನ್ನು ಎತ್ತಿ ಆಡಿಸಿದಳು! ಅವ ರೆಲ್ಲರೂ ಬಹಳಕಾಲದ ವರೆಗೂ ಸುಖ ವಾಗಿದ್ದರು. [ ಮುಗಿಯಿತು ]





# ಗುಣವತಿ



ಪೂರ್ವಕಾಲದಲ್ಲಿ ಕಾಂಚೀಪುರದಲ್ಲಿ ಶಕ್ತಿ ಸಾರನೆಂಬ ವೈಶ್ಯಯುವಕನಿದ್ದ. ಮುತ್ತಜ್ಜನ ಕಾಲದಿಂದಲೂ ನಡೆದುಬಂದ ವ್ಯಾಪಾರವನ್ನೇ ಅವನೂ ಮಾಡುತ್ತ, ಲಕ್ಷಾಧಿಪತಿಯಾಗಿದ್ದ. ಇಪ್ಪತ್ತನೇ ವಯಸ್ಸಿನಲ್ಲಿ ಅವನಿಗೆ ಮದುವೆ ಯಾಗಬೇಕೆಂದು ತೋರಿತು.

"ಗೃಹಿಣಃ ಪ್ರಿಯಹಿತಾಯ ದಾರ ಗುಣಾಃ" (ಹೆಂಡತಿಯ ಗುಣಗಳೇ ಗೃಹಸ್ಥ ನಿಗೆ ಪ್ರಿಯವನ್ನೂ ಹಿತವನ್ನೂ ಕೊಡಬಲ್ಲುವು) ಎಂಬ ಸಾರವಾಕ್ಯವನ್ನು ಆತ ಕೇಳಿದುದರಿಂದ ಶಕ್ತಿಸಾರನು ಸುಗುಣವತಿಯಾದವಳನ್ನೆ ಮದುವೆಯಾಗಬೇಕೆಂದು ನಿಶ್ಚಯಿಸಿಕೊಂಡ. ಬಳಿಕ ತಾನೇ ತನಗೆ ತಕ್ಕ ಕನ್ಯೆಯನ್ನು ಹುಡುಕಿಕೊಂಡು ಹೊರಟ.

ಶಕ್ತಿಸಾರನಿಗೆ ಸಾಮುದ್ರಿಕವೂ ತಿಳಿದಿತ್ತು. ಸಾಮುದ್ರಿಕ ಹೇಳುವ ನೆವನದಲ್ಲಿ ಆತ ಅನೇಕ ಕನ್ಯೆಯರ ಕೈಯನ್ನು ನೋಡಿದ. ಒಳ್ಳೆಯ ಲಕ್ಷಣವಿರುವ ಕನ್ಯೆಗಳಿಗೆ ಆತನು ಚಿಕ್ಕ ಪರೀಕ್ಷೆ ಯಿಡುತ್ತಿದ್ದ. ಆತ ತನ್ನೊಂದಿಗೆ ಎರಡು ಸೇರು ಬತ್ತವನ್ನೂ ತೆಗೆದುಕೊಂಡಿದ್ದ. ತಾನು ನೆಚ್ಚಿದ ಕನ್ಯೆಗೆ ಆ ಬತ್ತವನ್ನು ಕೊಟ್ಟು, "ಇಕೋಽಮ್ಮಾ, ಈ ಬತ್ತದಿಂದ ನನಗೀ ಒಂದು ಹೊತ್ತು ಅಡಿಗೆಮಾಡಿ ಬಡಿಸುವೆಯಾ?" ಎಂದು ಕೇಳು ತ್ತಿದ್ದ. ಇದನ್ನು ಕೇಳಿ ಕೆಲವರು ನಕ್ಕರು. ಮತ್ತೆ ಕೆಲವರು ಆಶ್ಚರ್ಯಪಟ್ಟು "ಅದು ಹೇಗಾದೀತು?" ಎಂದು ತಿರುಗಿ ಕೇಳಿದರು. ಅಂತೂ ಅವನ ಕೆಲಸವನ್ನು ಒಪ್ಪಿಕೊಳ್ಳುವ ಕನ್ಯೆಯರಾರೂ ಕಾಣಲಿಲ್ಲ.

ಹೀಗೆ ಆತನು ಕನ್ಯಾನ್ವೇಷಣೆಮಾಡುತ್ತಾ, ಕಾವೇರೀತೀರದ ಒಂದು ಗ್ರಾಮವನ್ನು ತಲ ಪಿದ. ಅಲ್ಲೊಂದು ಗುಡಿಸಲಿನಲ್ಲಿ ಗುಣವತಿ ಎಂಬ ಹುಡುಗಿ ಒಬ್ಬಳು ಮುದುಕಿಯೊಂದಿಗೆ ವಾಸಮಾಡುತ್ತಿದ್ದಳು. ಬಹಳ ಬಡವರು.

ಶಕ್ತಿಸಾರನು ಗುಣವತಿಯ ಹಸ್ತವನ್ನು ನೋಡಿದ. ಒಳ್ಳೆಯ ಲಕ್ಷಣಗಳಿದ್ದುವು. ಕೂಡಲೇ ಆತ, "ನೋಡಮ್ಮ, ನನ್ನಹತ್ತಿರ ಬತ್ತವಿದೆ. ಅದರಿಂದ ನನಗೀ ಹೊತ್ತಿಗೆ ಅಡಿಗೆಮಾಡಿ ಬಡಿಸಬಲ್ಲೆಯಾ?" ಎಂದು

ಪಿ. ರಾಮನಾಥಶಾಸ್ತ್ರಿ

ಕೇಳಿದ. ಗುಣವತಿ ಈ ಮಾತು ಕೇಳಿ ನಗಲೂ ಇಲ್ಲ, ಆಶ್ಚರ್ಯಪಡಲೂ ಇಲ್ಲ. ಆತನು ಕೇಳಿದಂತೆಯೇ ಬತ್ತದಿಂದ ಅಡಿಗೆಮಾಡಿ ಬಡಿಸಲಿಕ್ಕೆ ಒಪ್ಪಿಕೊಂಡಳು.

ಅವಳು ಬತ್ತವನ್ನು ತೆಗೆದುಕೊಂಡು ಸ್ವಲ್ಪ ಒದ್ದೆಮಾಡಿ ಆರಿಸಿ ಕುಟ್ಟಿಕೇರಿ ಉಮಿತೆಗೆದಳು. ಆ ಉಮಿಯನ್ನು ಅಜ್ಜಿಗೆ ಕೊಟ್ಟು, "ಅವ್ವಾ, ಇದನ್ನು ಅಕಸಾಲಿಗನಿಗೆ ಮಾರಿ, ಬಂದ ದುಡ್ಡಿಗೆ ತೀರ ಒಣಕಲೂ ಅಲ್ಲದ, ತೀರ ಹಸಿಯೂ ಅಲ್ಲದ ಕಟ್ಟಿಗೆ ಮತ್ತು ಸ್ವಲ್ಪ ನೆಲ್ಲಿಂಡಿ ಕೊಂಡುಕೊಂಡು ಬಾ" ಎಂದು ಹೇಳಿ ಕಳುಹಿಸಿದಳು.

ಮುದುಕಿ ಹಾಗೇ ಮಾಡಿಕೊಂಡು ಬಂದಳು. ಗುಣವತಿ ಒಲೆಹಚ್ಚಿ ಎಸರಿಟ್ಟು ಅಕ್ಕಿ ತೊಳೆದುಹಾಕಿದಳು. ಅದು ಬೇಯುತ್ತಲೇ ಬಸಿದು, ಆ ಅಂಬಲಿಗೆ ಸ್ವಲ್ಪ ಉಪ್ಪು ಹಾಕಿದಳು. ತುಸು ನೆಲ್ಲಿಂಡಿ ಚಟ್ನಿ ಅರೆದು, ಅಂಬಲಿಯನ್ನೂ ಚಟ್ನಿಯನ್ನೂ ಶಕ್ತಿಸಾರನಿಗೆ ಕೊಟ್ಟು, "ಈಗ ಈ ಚಟ್ನಿ ನಂಚಿಕೊಂಡು ಅಂಬಲಿಯನ್ನು ಕುಡಿಯಿರಿ. ಸ್ವಲ್ಪ ವಿಶ್ರಾಂತಿ ತೆಕ್ಕೊಳ್ಳಿ. ನಂತರ ಸ್ನಾನಮಾಡಿ ಊಟಕ್ಕೆ ಬನ್ನಿ" ಎಂದಳು.

ಅನ್ನಮಾಡಿದಮೇಲೆ ಗುಣವತಿ ಸ್ವಲ್ಪ ಕೆಂಡವನ್ನಾರಿಸಿ, ಆ ಇದ್ದಿಲಿಗಳನ್ನು ಅವ್ವನ ಕೈಗೆ ಕೊಟ್ಟು "ಇದನ್ನುಕೂಡಾ ಯಾರಿಗಾದರೂ ಕೊಟ್ಟು ಸ್ವಲ್ಪ ತರಕಾರಿ ಮತ್ತು ಮಜ್ಜಿಗೆ ತಾ" ಎಂದಳು.

ಸ್ವಲ್ಪಹೊತ್ತಿಗೆ ಮುದುಕಿ ತಂದ ಸೊಪ್ಪನ್ನು ಹಚ್ಚಿ ಮುದ್ದೆ ಹುಳಿಮಾಡಿದಳು. ಹೊತ್ತಿಗೆ ಸರಿಯಾಗಿ ಅತಿಥಿಯನ್ನು ಊಟಕ್ಕೆ ಕರೆದಳು.

ಶಕ್ತಿಸಾರನು ಸ್ನಾನಮಾಡಿ ಬಂದು ಸೊಪ್ಪಿನ ಮುದ್ದೆಹುಳಿ ಮತ್ತು ಮಜ್ಜಿಗೆಯೊಂದಿಗೆ ಹೊಟ್ಟೆತುಂಬಾ ಊಟಮಾಡಿದನು. ಅವನಿಗೆ ಗುಣವತಿಯ ಮಿತವ್ಯಯತೆಯೂ, ಯುಕ್ತಿಯೂ ಬಹಳ ಹಿಡಿಸಿತು. ತರುವಾಯ ಅವನು ತನ್ನ ನಿಜವೃತ್ತಾಂತವನ್ನು ಹೇಳಿ, ತನ್ನನ್ನು ಮದುವೆಮಾಡಿಕೊಳ್ಳಬೇಕೆಂದು ಕೇಳಿದನು. ಗುಣವತಿ ಒಪ್ಪಿದಳು. ಮತ್ತೇನು? ಗುಣವತಿ ಲಕ್ಷಾಧಿಪತಿಯ ಪತ್ನಿಯಾಗಿ ಬಹಳಕಾಲ ಸುಖವಾಗಿದ್ದಳು.





# ಕಾಗೆ ಗೂಗೆಗಳು

ನುತ ಮಹಿಲಾರೋಪಿಯ ನಗರದ ಬಳಿ
ಹಿರಿಯಾಲದಮರ ಒಂದಿತ್ತು.
ನಾಲ್ಕಡೆ ಹರಡಿದ ಕೊಂಬೆಗಳಿಂದೆಲೆ
ತುಂಬಿ ಘನಗುಮುಟದಂತಿತ್ತು.

ಮೇಘವರ್ಣನೆನ್ನುವ ವಾಯಸಪತಿ
ಆ ಮರವನು ಆಳುತಲಿತ್ತು.
ಕೆಲದಲಿ ಬೆಟ್ಟದ ಗವಿಯಲಿ ಕಳ್ಳರ
ಗುರು ಘೂಕದ ದೊರೆತನವಿತ್ತು.

ಅರಿಮರ್ದನನೆಂಬಾ ಘೂಕವು ತಾ
ಸರಿರಾತ್ರಿಗೆ ಹೊರಡುತಲಿತ್ತು.
ವಟವೃಕ್ಷದ ಕಾಗೆಗಳನು ತಿವಿದು
ಪಟಪಟನೇ ಕೊಲ್ಲುತಲಿತ್ತು.

ದಿನವೂ ಈಪರಿ ಸಾಯುತೆ ಕಾಗೆಯ
ಗಣನೆ ಇಳಿಯುತಲೆ ಬರುತಿತ್ತು.
ಹೀಗೇ ವಂಶವು ಅಳಿವುದ ಕಾಣುತೆ
ಮೇಘವರ್ಣ ಚಿಂತಿಸುತಿತ್ತು.

ಹಗೆಗಾರನ ನೆರೆಮನೆಯೇ ಇದ್ದರೆ
ಎಂದೂ ತಪ್ಪದು ಆಪತ್ತು.
ಶತ್ರು, ರೋಗ, ಬೆಂಕಿಯಕಿಡಿ ಇವುಗಳ
ಅಳಿಸಬೇಕು ಪೂರಾ ಕಿತ್ತು.

ಚಿಂತಿಸಿ ಒಂದಿನ ಮಂತ್ರಿಗಳೊಂದಿಗೆ
ತನ್ನ ತಾಪವನು ಮಂಡಿಸಿತು.
ಗೂಗೆಯ ರೂಪದ ಮೃತ್ಯುವ ಕೊಲ್ಲುವ
ತಂತ್ರದ ಮಾರ್ಗವ ಪ್ರಶ್ನಿಸಿತು.

ಇರುಳಲಿ ಕಾಣದೆ ಬಂದು ಕೊಲ್ಲುವುದು
ಹಗಲಲಿ ಅಡುಗುವುದಾ ಮೃತ್ಯು.
ಘಾತುಕವಾದಾ ಘೂಕಪಿಶಾಚಿಗೆ
ಬರಿಸಬೇಕಾಯ್ತು ಅಪಮೃತ್ಯು.

ಕಾಕಮಂತ್ರಿಗಳು ತಲೆಕೆರೆದಾಡಿಸಿ
ಯೋಚಿಸಿ ಯೋಚಿಸಿ ಬಲುಹೊತ್ತು.
ಉಜ್ಜೀವಕವೆಂಬಮಾತ್ಯ ಕಾಕವು
ನುಡಿಯಿತು, ದನಿಯಲಿ ಭಯವಿತ್ತು.

ಮಾರಂಗ



“ ನಮಗೂ ಮಿಂಚಿದ ಬಲವುಳ್ಳವರಲಿ
ಕಾಳೆಗಕೆಳಸುವುದಾಪತ್ತು.
ಗೆಲುವನುಮಾನದ ಪ್ರಸಂಗದೊಳಗೆ
ದುಡುಕಲು ಮಡಿದೇವಲ ಸತ್ತು!

ಗೆಲುವನುಮಾನದ ನೆಲೆಯುಲಿ ಮುಂದಕೆ
ಇಡುವುದೊಳಿತು ಸಂಧಿಯ ಒತ್ತು.
ಮಧುರವಾಗಿಯೇ ನುಡಿಸಿ ವೈರಿಯನು
ಕಳುಹಬೇಕು ಕೇಳ್ವುದ ತೆತ್ತು.

ಧನವೋ ಜನವೋ ಹೊನ್ನೋ ಮಣ್ಣೋ
ಬಯಸದೆ ಬರಲಾರನು ಶತ್ರು.
ಧುಡುಮ್ಮ ಕದನಕೆ ಇಳಿವುದು ವ್ಯರ್ಥವು.
ಹೆಮ್ಮೆ ಎಂಬುದೇ ಹಿತಶತ್ರು.



ಇಲಿಯ ಬಿಲವ ಸಿಂಹವು ತೋಡಿದರೇನ್?
ಅದರ ನಖವೆ ಸವೆದುರಿದೀತು.
ಬಲವನು ಯೋಚಿಸದುಪಯೋಗಿಸಿದರೆ
ಬಹಳ ತಾಪವೆಮಗಾದೀತು.”

ಹೀಗೆ ಸಂಧಿ ಮೇಲೆಂದುದ ಕೇಳುತೆ
ಮಂತ್ರಿ ಸಂಜೀವಿ ಹೀಗಂತು :
“ ಕೂಡದು, ಸಂಧಿಯೆ ಕೂಡದು! ಅದರಿಂ
ಕ್ರೂರವೈರ ಹೋಗುವುದೆಂತು?

ಸಾಮದಾನಗಳ ಕ್ರೂರಗೆ ತೋರಲು
ಹೇಡಿತನವೆ ನಮಗಾದೀತು.
ಜ್ವರವು ಶೀತಜಲ ತಳಿದರೆ ಪೋಪುದೆ?
ಮದ್ದರೆದರೇನೆ ಹೋದೀತು!

ಶಕ್ತಿಯಿಂದ ಗೆಲಲಾಗದೆ ಹೋದರೆ
ಯುಕ್ತಿಯೆ ವೈರಿಯ ಮುರಿದೀತು.
ಭೇದ, ತಂತ್ರಗಳ ಹೂಡಿ ಹೊಡೆದರೆ, ಅ
ಮೋಘಬಲವೆ ಹತವಾದೀತು!”

ಆಗ ನುಡಿಯಿತನುಜೀವಿಮಂತ್ರಿ “ ಇದು
ಸುಲಭವಲ್ಲ ಗೂಗೆಯ ಕತ್ತು!
ಸಂಧಿವಿಗ್ರಹಕೆ ವೈರಿಯೊಪ್ಪದಿರೆ,
ಸಂಧಿಮಾತು ನಮಗೇ ಕುತ್ತು!

ಸಂಧಿಯೂ ಬೇಡ, ಸಮರವೂ ಬೇಡ!
ಮಾತಾಡದೆ ನಾವ್ ತಳಕಿತ್ತು,
ದುಷ್ಟಗೆ ದೂರಿರು ಎಂಬಾ ನೀತಿಯ
ಬೆಂಬಿಡಿಯಲಿದೇ ಸರಿಹೊತ್ತು!



ನಿತ್ಯಮರಣವನು ತಪ್ಪಿಸಿಕೊಂಬುದ
ತಪ್ಪೆನಲಾರದು ಈ ಜಗತು.
ಮುಪ್ಪಿನವರೆಗೂ ಬದುಕಲೆಂಬುದೇ
ಸಕಲ ಪ್ರಾಣಿಗಳ ಗುರಿಗತ್ತು.''

ಒಡನೆಯೆ ಪ್ರಜೀವಿಮಂತ್ರಿ ಬೇಡವದು,
ಬೇಡೆನ್ನುತೆ ತಲೆಯಾಡಿಸಿತು.
" ಮೊಸಳೆ ನೀರಲೇ ಇದ್ದು ಆನೆಯನು
ಕೆಡವದೆ? ಸ್ವಸ್ಥಳ ಬಹುಮಹತು!

ಕೋಟೆಯ ಬಿಡದೊಳಗಿದ್ದೇ ರಿಪುವಿನ
ರೀತಿ ಪರೀಕ್ಷಿಸುವುದು ಒಳಿತು.
ಸ್ವಸ್ಥಳಬಿಟ್ಟು ಹೊಸಸ್ಥಳಕ್ಕೈದುತ
ತಿರಿವುದು ಬರಿ ಕೈಕಾಲ್‌ಸುತ್ತು!

ಶುನಕದಂತೆ ಸ್ವಸ್ಥಾನದ ಬಲದಲಿ
ಧೈರ್ಯಗೆಡದೆ ನಾವ್ ಬಿಗಿಕುಳಿತು
ಒಗ್ಗಟ್ಟಿನ ಬಲದಿಂ ಖಳಘೂಕವ
ಕೊಲ್ಲಬೇಕು ಸಮಯವನರಿತು.''

ಸಚಿವ ಚಿರಜೀವಿ ಈಪರಿ ನುಡಿಯಿತು:
" ನಮಗೊಂದಾಶ್ರಯ ಬೇಕಾಯ್ತು.
ಕಾನನಾಶ್ರಯದ ಮೆಳೆಯಾ ಬಿದಿರನು
ಕದಲಿಸಲಾರಿಂದಾದೀತು!

ಹುಡುಕಬೇಕು ನಮಗೊಂದು ಘನಾಶ್ರಯ
ಬಾರದಿರಲು ಗೂಗೆಯ ಮಿತ್ತು.
ನಮ್ಮ ಘನಾಶ್ರಯ ಭೇದಿಸಲಾಗದೆ
ಗೂಗೆ ತಾನೆ ಸಾಯ್ವುದು ಅತ್ತು.''

ಸ್ಥಿರಜೀವಿ ಮಂತ್ರಿ ಹೇಳಿತು: " ಒಳಿತಿವು,
ಆದರೇನು ಫಲವಾದೀತು?
ಇದಕೊಂದುಪಾಯ ಬೇರಿದೆ, ರಿಪುವಿನ
ಬಲ-ಬೆಂಬಲಗಳ ಕಂಡರಿತು;

ಮೆಲ್ಲ ಮೆಲ್ಲದರ ಉಪಬಲ ಕಳೆದರೆ
ಸುಲಭ ಮುರಿಯಲದರಾ ಕತ್ತು.
ನಾವಾ ಗೂಗೆಯ ಶಕ್ತಿಯ ಕಾರಣ
ತಿಳಿದು ಮಾಡೋಣ ಸರಿಗತ್ತು.''

ಹೀಗೆ ಮಂತ್ರಿಗಳು ಪೇಳೆ, ಕಾಕಪತಿ
ತೂಗಿ ತೂಗಿ ತಲೆ, ಆಲಿಸಿತು.
ಅಸಲು ಕಾಗೆಗೂ ಗೂಗೆಗೂ ವೈರ
ವೇಕೆ ಬಂತೆಂದು ಪ್ರಶ್ನಿಸಿತು.



# ಕೀಲುಕುದುರೆ

ನೂರಾರು ವರ್ಷಗಳಹಿಂದೆ ಪರ್ಷಿಯಾ ದೇಶವನ್ನು ಸಾಬೂರ್ ಎಂಬ ಚಕ್ರವರ್ತಿ ಆಳುತ್ತಿದ್ದನು. ಆಗ ಪ್ರಪಂಚದಲ್ಲಿ ಆತನನ್ನು ಮೀರಿಸಿದ ಸಾರ್ವಭೌಮನು ಬೇರೊಬ್ಬನಿರಲಿಲ್ಲ. ಧಾನಧರ್ಮ ಮಾಡುವುದರಲ್ಲೂ, ಪ್ರಜಾ ಸೌಖ್ಯವನ್ನು ಗಮನಿಸುವುದರಲ್ಲೂ ಆತನ ಸಮಾನರಿರಲಿಲ್ಲ. ಯಾರು ಬೇಕಾದರೂ ನೇರವಾಗಿ ಅರಮನೆಯಲ್ಲಿ ಪ್ರವೇಶಿಸಿ, ತಮಗೆ ಬೇಕಾದುದನ್ನು ಬೇಡಬಹುದಿತ್ತು. ಚಕ್ರವರ್ತಿ ಅವರಿಗೆ ಇಲ್ಲವೆಂದು ಹೇಳುತ್ತಿರಲಿಲ್ಲ.

ಸಾಬೂರ್ ಚಕ್ರವರ್ತಿಗೆ ಕಮರಲ್ ಅಕ್ಮಾರ್ ಎಂಬ ಕುವರನೂ, ಮೂವರು ಸುಂದರಿಯರಾದ ಕುವರಿಯರೂ ಇದ್ದರು. ಆತನು ಪ್ರತಿವರ್ಷ ಎರಡು ಹಬ್ಬಗಳನ್ನು ಮಾತ್ರ ವಿಜೃಂಭಣೆಯಿಂದ ಆಚರಿಸುವನು. ಒಂದು ಹಬ್ಬ ವಸಂತಕಾಲದಲ್ಲೂ, ಮತ್ತೊಂದು ಶರತ್ಕಾಲದಲ್ಲೂ ಬರುತಿತ್ತು. ಆಗ ಚಕ್ರವರ್ತಿ ಭಾರಿ ಔತಣಗಳನ್ನೂ ಸಮಾರಾಧನೆಗಳನ್ನೂ ಏರ್ಪಡಿಸುತ್ತಿದ್ದನು. ಈ ಉತ್ಸವಗಳಿಗೆ ಪ್ರಪಂಚದ ಮೂಲೆಮೂಲೆಗಳಿಂದ ಜನ ಬರುತ್ತಿದ್ದರು. ಚಕ್ರವರ್ತಿಗೆ ಕಾಣಿಕೆ ಸಲ್ಲಿಸಿ, ಆತನಿಂದ ಉಡುಗೊರೆಗಳನ್ನು ಪಡೆಯುತ್ತಿದ್ದರು. ಆ ಹಬ್ಬದಿನಗಳಂದು ಕೆಲವಾರು ಖೈದಿಗಳನ್ನು ಬಿಡುಗಡೆಮಾಡುವರು. ಅಧಿಕಾರಿಗಳಿಗೆ ಪ್ರಶಸ್ತಿಗಳನ್ನು ದಯಪಾಲಿಸುವುದು ವಾಡಿಕೆಯಲ್ಲಿತ್ತು. ಇಷ್ಟೇ ಅಲ್ಲ, ಕೆಲವರ ಸಂಬಳಸಾರಿಗೆಗಳನ್ನು ಉತ್ತಮಪಡಿಸುತ್ತಿದ್ದರು.

ಒಂದು ವರ್ಷ ವಸಂತೋತ್ಸವಕ್ಕೆ ಮೂವರು ಸಿದ್ಧರು ಬಂದರು. ಅವರಲ್ಲೊಬ್ಬ ಹಿಂದೂ ದೇಶದಿಂದಲೂ, ಮತ್ತೊಬ್ಬ ರೋಮ್‌ದೇಶದಿಂದಲೂ, ಮೂರನೇಯಾತನು

ಸುನಂದಾದೇವಿ





ಪರ್ಷಿಯಾದೇಶದ ದೂರಪ್ರಾಂತದಿಂದಲೂ ಬಂದಿದ್ದರು. ಎಲ್ಲರಂತೆ ಆ ಸಿದ್ಧರೂ ಸಹ ರಾಜನಿಗೆ ಮೂರು ವಸ್ತುಗಳನ್ನು ಕಾಣಿಕೆಯಾಗಿ ಸಲ್ಲಿಸಿದರು. ಆದರೆ ಅವರು ಅರ್ಪಿಸಿದ ವಸ್ತುಗಳು ತೀರಾ ಅಪೂರ್ವವಾದುವು!

ಹಿಂದೂದೇಶದಿಂದ ಬಂದಿದ್ದ ಸಿದ್ಧನು ರಾಜನಿಗೆ ಒಂದು ಚಿನ್ನದಲ್ಲಿ ಮಾಡಿದ್ದ ಮಾನವನ ವಿಗ್ರಹವನ್ನು ಕೊಟ್ಟನು. ಆ ವಿಗ್ರಹದ ಕೈಯಲ್ಲಿ ಒಂದು ಶಿಳ್ಳು ಇತ್ತು. ರಾಜನು ಆ ವಿಗ್ರಹವನ್ನು ನೋಡಿ ಅದರ ರಚನೆಯನ್ನು ಮೆಚ್ಚಿಕೊಂಡು "ಇದು ತುಂಬಾ ಅಂದವಾಗಿದೆ. ಆದರೆ ಇದರಿಂದ ಉಪಯೋಗವೇನು?" ಎಂದು ಕೇಳಿದನು.

"ಮಹಾಪ್ರಭು, ಈ ವಿಗ್ರಹವನ್ನು ನಿಮ್ಮ ಕೋಟೆದ್ವಾರದಬಳಿ ಪ್ರತಿಷ್ಠಾಪನೆ ಮಾಡಿ. ಶತ್ರುಗಳು ಕೋಟೆಯಬಳಿಗೆ ಬಂದಾಗ ಇದು ಕೈಯಲ್ಲಿರುವ ಶಿಳ್ಳನ್ನು ತೆಗೆದು ಊದುವುದು. ಆ ಸದ್ದು ಕೇಳಿ ಶತ್ರುಗಳು ಚಲ್ಲಾಪಿಲ್ಲಿಯಾಗಿ ಚದುರಿ ಪರಾರಿಯಾಗುವರು. ಈ ವಿಗ್ರಹ ಕೋಟೆಯಬಳಿಯಿರುವಷ್ಟು ಕಾಲ ನಿಮಗೆ ಶತ್ರುಭಯವಿರಲಾರದು" ಎಂದ ಹಿಂದೂದೇಶದಿಂದ ಬಂದ ಸಿದ್ಧಪುರುಷ.

ಚಕ್ರವರ್ತಿ ರೋಮ್‌ದೇಶದ ಸಿದ್ಧಪುರುಷನು ತಂದ ಕಾಣಿಕೆಯಕಡೆ ಕಣ್ಣು ಹೊರಳಿಸಿದನು. ಒಂದು ವಿಶಾಲವಾದ ರಜತ ತಟ್ಟೆಯ ನಡುವೆ ಒಂದು ಚಿನ್ನದ ಗಂಡು ನವಿಲಿತ್ತು. ಅದರ ಸುತ್ತಲೂ ಚಿನ್ನದ ಹೆಣ್ಣು ನವಿಲುಗಳನ್ನು ಜೋಡಿಸಿದ್ದರು. ಅದೂ ಸಹ ನೋಡಲು ಸೊಗಸಾಗಿತ್ತು. ಅದರ ಉಪಯೋಗವೇನೆಂದು ಚಕ್ರವರ್ತಿ ಪ್ರಶ್ನಿಸಿದನು.

"ಮಹಾಪ್ರಭು, ಈ ಹೆಣ್ಣು ನವಿಲುಗಳು ಗಂಟೆಗೊಂದರಂತೆ ಇಡೀದಿನ ಕೂಗಿ ನಿಮಗೆ ಗಂಟೆಯನ್ನು ತಿಳಿಸುವುವು. ಗಂಡುನವಿಲು ಮಾತ್ರ ತಿಂಗಳಿಗೊಮ್ಮೆ ಬಾಯಿ ತೆರೆದು ಚಾಂದ್ರಮಾನವನ್ನು ತೋರಿಸುವುದು. ಇದೇ ಈ ನವಿಲುಗಳಲ್ಲಿರುವ ವಿಶೇಷ" ಎಂದು ರೋಮ್‌ದೇಶದ ಸಿದ್ಧಪುರುಷನು ಹೇಳಿದನು.

ಚಕ್ರವರ್ತಿ ಸಂತಸಗೊಂಡು ಮೂರನೇ ಕಾಣಿಕೆಯಕಡೆ ನೋಡಿದನು. ಅದೊಂದು ಕರಿಮರದಿಂದ ಮಾಡಿದ ಅಶ್ವ. ಅದಕ್ಕೆ ರತ್ನ ಖಚಿತವಾದ ದುಪ್ಪಟಿ ಹಾಸಿತ್ತು. ಅದರ

ಬೆನ್ನಮೇಲೆ ಹತ್ತಿ ಕುಳಿತುಕೊಳ್ಳಲು ಬೇಕಾದ ಸಕಲ ಸಾಧನಗಳೂ ಇದ್ದುವು.

"ನೋಡಲು ಕುದುರೆ ತುಂಬಾ ಮುಚ್ಚಟೆಯಾಗಿದೆ. ಆದರೆ ಇದರ ಪ್ರಯೋಜನವೇನೋ ತಿಳಿಸುವೆಯಾ?" ಚಕ್ರವರ್ತಿ ಕೇಳಿದನು.

ಅದಕ್ಕೆ ಪರ್ಷಿಯಾದೇಶದ ಸಿದ್ಧಪುರುಷನು "ಚಕ್ರವರ್ತಿ, ಇದೊಂದು ಕೀಲು ಕುದುರೆ. ಯಾರಾದರೂ ಇದರಮೇಲೆ ಹತ್ತಿ ಆಕಾಶಮಾರ್ಗದಲ್ಲಿ ಎಲ್ಲಿಗೆ ಬೇಕಾದರೂ ಅತಿ ವೇಗವಾಗಿ ಹೋಗಬಹುದು. ಸಾಮಾನ್ಯ ಕುದುರೆಯಮೇಲೆ ಒಂದು ವರ್ಷ ಏಕರೀತಿಯಾಗಿ ಪ್ರಯಾಣಮಾಡಿದಷ್ಟು ದೂರ ಒಂದೇ ಒಂದು ದಿನದಲ್ಲಿ ಇದರಮೇಲೆ ಕುಳಿತು ಹೋಗಬಹುದು" ಎಂದನು.

"ಭಲಾ, ನೀವು ಮೂವರೂ ತಂದ ಕಾಣಿಕೆಗಳು ತುಂಬಾ ಅದ್ಭುತವಾಗಿವೆ. ಅವುಗಳನ್ನು ಪರೀಕ್ಷೆಮಾಡಿದಹೊರತು ಅವುಗಳ ಮಹಿಮೆಯನ್ನು ನಾನು ನಂಬಲಾರೆ" ಎಂದ ಸಾಬೂರ್ ಚಕ್ರವರ್ತಿ.

ಕೂಡಲೇ ಆ ಮೂರು ವಸ್ತುಗಳನ್ನು ಪರೀಕ್ಷೆಗಿಟ್ಟರು. ಅವೆಲ್ಲಾ ಪರೀಕ್ಷೆಯಲ್ಲಿ ವಿಜಯಹೊಂದಿದುವು. ಬಂಗಾರದ ವಿಗ್ರಹ ತನ್ನಕಡೆ ಬರುವ ಸೈನಿಕರನ್ನು ಕಂಡ ಕೂಡಲೇ ಶಿಳ್ಳೂದಿ ಅವರನ್ನು ಗಾಬರಿಗೊಳಿಸಿತು. ಹೆಣ್ಣು ನವಿಲುಗಳು ಗಂಟೆ ಗಂಟೆಗೂ ಕೂಗುತ್ತಿದ್ದುವು. ಕೀಲುಕುದುರೆಯನ್ನು ತಂದ ಸಿದ್ಧನು ಅದರಮೇಲೆ ಗಗನಕ್ಕೆ ಹಾರಿ ಪ್ರಪಂಚವನ್ನೆಲ್ಲಾ ಒಂದುಸಾರಿ



ಸುತ್ತಿ ಚಕ್ರವರ್ತಿಯ ಮುಂದಿಳಿದನು. ಈ ವಿಚಿತ್ರವನ್ನು ಕಂಡು ಚಕ್ರವರ್ತಿ ವಿಸ್ಮಿತನಾದನು. ಆತನು ಮೂವರು ಸಿದ್ಧರನ್ನು ಕುರಿತು "ನೀವು ನನಗೆ ಅತ್ಯಂತ ಅಮೂಲ್ಯವಾದ ವಸ್ತುಗಳನ್ನು ಕಾಣಿಕೆಯಾಗಿ ಸಲ್ಲಿಸಿರುವಿರಿ. ಅದಕ್ಕೆ ಪ್ರತಿಫಲವಾಗಿ ನೀವು ಕೋರುವುದನ್ನು ನಾನು ಕೊಡುತ್ತೇನೆ. ಅದು ನನ್ನ ಕರ್ತವ್ಯ. ಆದುದರಿಂದ ನಿಮಗೆ ಬೇಕಾದುದನ್ನು ಸಂಕೋಚವಿಲ್ಲದೆ ಕೇಳಿ. ನಾನು ನನ್ನ ಕರ್ತವ್ಯವನ್ನು ಮಾಡುತ್ತೇನೆ" ಎಂದು ಹೇಳಿದನು.

ಅವರು ಮೂವರು ರಾಜಕುಮಾರಿಯರನ್ನು ವಿವಾಹವಾಗಲು ಅಪೇಕ್ಷಿಸಿದರು. ಚಕ್ರವರ್ತಿ ತುಸವಾದರೂ ಸಂಕೋಚಪಡದೆ ಕೂಡಲೇ ಖಾಜಿಯನ್ನು ಬರಮಾಡಿಸಿ, ತುಂಬಿದ ಸಭೆಯಲ್ಲಿ ಲಗ್ನಪತ್ರಿಕೆಗಳನ್ನು ಬರೆಯಿಸಿದನು. ಚಕ್ರವರ್ತಿಯ ಹಿರಿಯ ಮಗಳನ್ನು ಹಿಂದೂದೇಶದ ಸಿದ್ಧಪುರುಷನಿಗೂ, ಎರಡನೇ ಕುವರಿಯನ್ನು ರೋಮ್ ದೇಶದವನಿಗೂ, ಕಿರಿಯ ಮಗಳನ್ನು ಪರ್ಷಿಯಾ ದೇಶದವನಿಗೂ ಕೊಡುವ ಏರ್ಪಾಡಾಯಿತು.

ಲಗ್ನಪತ್ರಿಕೆಗಳನ್ನು ಬರೆಯಿಸುತ್ತಿರುವಾಗ ರಾಜಕುಮಾರಿಯರು ಪರದೆಯ ಹಿಂದೆ ಕುಳಿತು ನೋಡುತ್ತಿದ್ದರು. ಅವರಲ್ಲಿ ಕಿರಿಯವಳು ತನ್ನ ಅಕ್ಕಂದಿರಿಗಿಂತಲೂ ಮಿಗಿಲಾದ ಸುಂದರಿ. ಅವಳು ತನ್ನ ಭಾವಿ ಪತಿಯನ್ನು ನೋಡಿ ಹೆದರಿಬಿಟ್ಟಳು. ಪರ್ಷಿಯಾದೇಶದ ಸಿದ್ಧನು ವಯೋವೃದ್ಧನು. ಶರೀರವೆಲ್ಲ





ಸುಕ್ಕುಗಟ್ಟಿಹೋಗಿತ್ತು. ಕಣ್ಣು ಗುಳಿಸೇರಿತ್ತು. ನೋಡಲು ತುಂಬಾ ವಿಕಾರವಾಗಿದ್ದನು. ಅಷ್ಟು ಮುದುಕನು ತನ್ನ ಗಂಡನಾಗುವನೆಂಬ ವಿಷಯ ತಿಳಿದು ಅವಳು ದುಃಖವನ್ನು ತಡೆಯಲಾರದೆ ತನ್ನ ಕೋಣೆಗೆ ಹೋಗಿ ಹಾಸಿಗೆಯ ಮೇಲೆ ಬೋರಲುಬಿದ್ದು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಶೋಕಾವೇಶದಲ್ಲಿ ಅವಳು ತನ್ನ ತೊಡಿಗೆಯನ್ನು ಹರಿದುಕೊಂಡಳು. ಮುಖವನ್ನು ಪರಚಿಕೊಂಡಳು. ಜುಟ್ಟು ಕಿತ್ತುಕೊಂಡಳು. ಹೀಗೆ ಅವಳು ಸಾಕ್ಷಾತ್ ಶೋಕದೇವತೆಯಂತೆ ಕಾಣಿಸತ್ತಿದ್ದಳು.

ಇದು ನಡೆದಾಗ ರಾಜಕುಮಾರ ಅಕ್ಮಾರ್ ಬೇಟೆಗೆ ಹೋಗಿದ್ದನು. ಅವನು ಬೇಟೆಯಿಂದ ಹಿಂತಿರುಗಿದ ಕೂಡಲೇ ತನ್ನ ಕಿರಿಯ ತಂಗಿಯನ್ನು ಕಾಣಲು ಅವಳ ಕೋಣೆಗೆ ಹೋದನು. ಅವಳಿದ್ದ ಬಗೆ ಕಂಡು ರಾಜಕುಮಾರನಿಗೆ ಆಶ್ಚರ್ಯವಾಯಿತು. ಅವನು "ಏಕೆ ಅಳುತ್ತಿರುವೆ ತಂಗೀ. ಯಾರೇನು ಮಾಡಿದರು. ನನ್ನೊಂದಿಗೆ ಹೇಳಬಾರದೇ?" ಎಂದು ಮೃದುಮಧುರವಾಗಿ ಕೇಳಿದನು.

ರಾಜಕುಮಾರಿ ಮತ್ತಷ್ಟು ಗಟ್ಟಿಯಾಗಿ ಅಳಲಾರಂಭಿಸಿದಳು. "ಅಣ್ಣಾ, ನಿನ್ನೊಂದಿಗಲ್ಲದೆ ನನ್ನ ಕಷ್ಟ ಬೇರೆ ಯಾರೊಂದಿಗೆ ಹೇಳಿಕೊಳ್ಳಲಿ? ನಾನು ಈ ಅರಮನೆಯಲ್ಲಿರಲಾರೆ. ಎಲ್ಲಿಗಾದರೂ ಹೋಗಿ ಬಿಕ್ಕೆಬೇಡಿ ಬಾಳುವೆನು. ಅಪ್ಪ ನನಗಿಷ್ಟು ಅನ್ಯಾಯ ಮಾಡುವರೆಂದು ನೆನೆಸಿರಲಿಲ್ಲ. ನನಗೆ ಅಲ್ಲಾ ಹೊರತು ಅನ್ಯದಿಕ್ಕಿಲ್ಲ." ಎಂದು ಆವೇಶಪೂರಿತಳಾಗಿ ನುಡಿದಳು.

"ಅಪ್ಪಾಜಿ ನಿನಗೆ ಮಾಡಿದ ದ್ರೋಹವಾದರೂ ಏನು? ನಿಷ್ಕಾರಣವಾಗಿ ನೀನೇಕೆ ದುಃಖಿಸುವೆ?" ಎಂದ ಅಕ್ಮಾರ್.

"ಅಣ್ಣಾ, ಏನು ಹೇಳಲಿ? ನನ್ನನ್ನು ಒಬ್ಬ ವಯೋವೃದ್ಧನಿಗೆ ಕೊಟ್ಟು ಮದುವೆ ಮಾಡಲು ಸಕಲ ಏರ್ಪಾಟುಗಳಾಗಿವೆ. ಆ ಮುದುಕನು ಮಾಯಾವಿಯಂತೆ ತೋರುವನು. ಅವನು ಅಪ್ಪನಿಗೆ ಒಂದು ಕೀಲು ಕುದುರೆಯನ್ನು ಕಾಣಿಕೆಯಾಗಿ ಕೊಟ್ಟು, ಅವರನ್ನು ಬುಟ್ಟಿಗೆ ಹಾಕಿಕೊಂಡಿರುವನು. ನಾನು ಪ್ರಾಣತ್ಯಾಗಮಾಡಲು ಸಿದ್ಧಳಿರುವೆನೇ ಹೊರತು ಆ ಮುದಿಯನನ್ನು ವಿವಾಹವಾಗ

ಲಾರೆ " ಎಂದಳು ರಾಜಕುಮಾರಿ. ಅಕ್ಮಾರ್ ತಂಗಿಯನ್ನು ಸಮಾಧಾನಪಡಿಸಿ, ತಂದೆಯ ಬಳಿಗೆ ಹೋಗಿ "ಅಪ್ಪಾ, ಯಾರೋ ಮಾಂತ್ರಿಕನು ನಿಮಗೇನೋ ಕಾಣಿಕೆ ಸಲ್ಲಿಸಿದ ನೆಂದು ನನ್ನ ತಂಗಿಯನ್ನು ಅವನಿಗೆ ಕೊಟ್ಟು ವಿವಾಹಮಾಡಲು ನಿರ್ಧರಿಸಿರುವುದಾಗಿ ತಿಳಿದುಬಂತು. ಈ ರೀತಿ ಅವಳ ಕತ್ತು ಕುಯ್ಯುವುದು ಸರಿಯೇ? ಹಾಗೆಂದಿಗೂ ನಡೆಯಲು ಸಾಧ್ಯವಿಲ್ಲ " ಎಂದ.

ಚಕ್ರವರ್ತಿಯ ಸಮೀಪದಲ್ಲಿದ್ದ ಪರ್ಷಿಯಾ ದೇಶದ ಸಿದ್ಧಪುರುಷನಿಗೆ ಬಹಳ ಕೋಪ ಬಂತು. ಅಷ್ಟರಲ್ಲಿ ಚಕ್ರವರ್ತಿ ಮಗನನ್ನು ಸಮಾಧಾನ ಗೊಳಿಸುವ ಧ್ವನಿಯಲ್ಲಿ "ಮಗೂ, ನೀನು ಈತನು ತಂದು ಕೊಟ್ಟಿರುವ ಕೀಲು ಕುದುರೆಯನ್ನು ಕಂಡಿದ್ದರೆ ಈ ರೀತಿ ಮಾತ ನಾಡುತ್ತಿರಲಿಲ್ಲ " ಎಂದು ಹೇಳಿ, ಅವನನ್ನು ಪ್ರಾಂಗಣಕ್ಕೆ ಕರೆದುಕೊಂಡು ಹೋದನು. ಸೇವಕರು ಕೀಲುಕುದುರೆಯನ್ನು ರಾಜ ಕುಮಾರನ ಮುಂದೆ ತಂದು ನಿಲ್ಲಿಸಿದರು. ಅದರ ಅಂದಚೆಂದಗಳನ್ನು ನೋಡಿ ಅಕ್ಮಾರನ ಮುಖವರಳಿತು. ಅವನು ಕುದುರೆ ಸವಾರಿ ಯಲ್ಲಿ ನಿಪುಣನೆಂದು ಪ್ರತೀತಿ. ಚಂಗನೆ ಕುದುರೆಯನ್ನೇರಿದನು. ಮಾಮೂಲು ಕುದುರೆ ಯನ್ನು ನಡಿಸುವಂತೆ ಆ ಕೀಲುಕುದುರೆ ಯನ್ನು ಓಡಿಸಲೆತ್ನಿಸಿದನು. ಆದರೆ ಅದು ಕದಲಲಿಲ್ಲ. ಆಗ ಚಕ್ರವರ್ತಿ ಸಿದ್ಧನಕಡೆ ತಿರುಗಿ " ಕುದುರೆಯನ್ನು ಓಡಿಸುವ ಉಪಾಯ ರಾಜ ಕುಮಾರನಿಗೆ ತಿಳಿಸು " ಎಂದನು. ಸಿದ್ಧನು



ರಾಜಕುಮಾರನಬಳಿಗೆ ಹೋಗಿ "ಕುದುರೆಯ ಕತ್ತಿನ ಬಲಗಡೆ ಯಿರುವ ಬಂಗಾರದ ಕೀಲನ್ನು ಪಕ್ಕಕ್ಕೆ ತಿರುಗಿಸಿದರೆ ಕುದುರೆ ಮೇಲಕ್ಕೇಳುತ್ತದೆ" ಎಂದನು.

ರಾಜಕುಮಾರನು ಮಿಾಟನ್ನು ತಿರುಗಿಸಲು, ಶರವೇಗದಿಂದ ಕುದುರೆ ಆಕಾಶಕ್ಕೆ ಹಾರಿ, ಕೆಲವು ಕ್ಷಣಗಳಲ್ಲೇ ಕಣ್ಣಿಗೆ ಕಾಣಿಸದಾಯಿತು. ಮಗನಿಗಾಗಿ ಚಕ್ರವರ್ತಿ ಬಹಳಹೊತ್ತು ಎದುರು ನೋಡುತ್ತಿದ್ದನು. ಎಷ್ಟು ಗಂಟೆಗಳಾದರೂ ಅವನ ಸುಳಿವಿಲ್ಲ. ಚಕ್ರವರ್ತಿಗೆ ಭಯವಾಯಿತು. ಆತನು ಸಿದ್ಧನೊಂದಿಗೆ "ಮಹಾತ್ಮರೇ, ರಾಜಕುಮಾರನು ಹಿಂತಿರುಗುವಬಗೆ ಹೇಗೆ?" ಎಂದು ಕೇಳಿದನು.

ತನಗೆ ರಾಜಕುಮಾರಿಯನ್ನು ಕೊಟ್ಟು ವಿವಾಹಮಾಡುವ ವಿಷಯದಲ್ಲಿ ಅಕ್ಮಾರ್ ಪ್ರತಿಕೂಲನಾಗಿರುವನೆಂದು ಆ ಸಿದ್ಧನು ಅರಿತಿದ್ದನು. ಅಂತಲೇ ಅವನಮೇಲೆ ಸಿದ್ಧನಿಗೆ ಕೋಪವಿತ್ತು, ಆದುದರಿಂದ ಅವನು ರಾಜಕುಮಾರನಿಗೆ ಕುದುರೆಯನ್ನು ಭೂಮಿಗಿಳಿಸುವ ರಹಸ್ಯವನ್ನು ತಿಳಿಸಲಿಲ್ಲ.

"ಸ್ವಾಮಿ, ಈಗ ನಾನೇನೂ ಮಾಡುವಂತಿಲ್ಲ. ನಿಮ್ಮ ಮಗನು ಹಿಂತಿರುಗುವ ಮಾತುಸುಳ್ಳು. ಕುದುರೆಯನ್ನು ಕೆಳಗಿಳಿಸುವ ರಹಸ್ಯ ವಿಧಾನವನ್ನು ಹೇಳುವಷ್ಟರಲ್ಲಿ ರಾಜಕುಮಾರನು ಆಕಾಶಕ್ಕೆ ಹಾರಿಬಿಟ್ಟನು. ಅಷ್ಟು ಆತುರವಿರಬಾರದಿತ್ತು" ಎಂದನು.

ಇದನ್ನು ಕೇಳಿದಕೂಡಲೇ ಸಾರ್ವಭೌಮನಿಗೆ ಸಿದ್ಧನಮೇಲೆ ಅತ್ಯಂತ ಆಗ್ರಹವುಂಟಾಯಿತು. ಅಲ್ಲಿದ್ದ ಭಟರೊಂದಿಗೆ "ಈ ದುಷ್ಟನನ್ನು ಸಾಯುವಂತೆ ಹೊಡೆದು, ಸೆರೆಮನೆಯಲ್ಲಿ ಕೂಡಿ ಹಾಕಿ" ಎಂದು ಆಜ್ಞಾಪಿಸಿದನು. ಅವರು ರಾಜಾಜ್ಞೆಯನ್ನು ಪಾಲಿಸಲೇ ಬೇಕಾಯಿತು.

ಚಕ್ರವರ್ತಿ ತನ್ನ ಮಗನನ್ನು ಕಾಣದೆ ದುಃಖಸಾಗರದಲ್ಲಿ ಮುಳುಗಿದನು. ಆತನ ದುಃಖವನ್ನು ಕಂಡು ಅಧಿಕಾರಿಗಳು ಅಂದಿನ ಉತ್ಸವಗಳನ್ನೆಲ್ಲಾ ನಿಲ್ಲಿಸಿಬಿಟ್ಟರು. ಸಭಿಕರೆಲ್ಲಾ ಅಂದಿನ ಸಭೆಯನ್ನು ಮುಕ್ತಾಯ ಮಾಡಿದರು. ಪ್ರಜೆಗಳೂ ತಮ್ಮ ಸಂತಾಪವನ್ನು ಸೂಚಿಸಿದರು. [ಇನ್ನೂ ಇದೆ]





# ಕಳ್ಳರ ನಾಯಕ

ಅನೇಕಾನೇಕ ವರ್ಷಗಳ ಹಿಂದೆ ಒಂದು ಅರಣ್ಯದಲ್ಲಿ ಕಳ್ಳರಗುಂಪೊಂದು ನಿವಾಸ ವೇರ್ಪಡಿಸಿಕೊಂಡಿತ್ತು. ಆ ಕಳ್ಳರು ಸುತ್ತ ಮುತ್ತಲಿದ್ದ ಗ್ರಾಮಗಳನ್ನು ಕೊಳ್ಳೆಹೊಡೆದು ಹೇರಳವಾಗಿ ಹಣವನ್ನು ಶೇಖರಿಸಿದ್ದರು. ಆ ಕಳ್ಳರಕೂಟವನ್ನು ಹಿಡಿದವರು ಯಾರೂ ಇರಲಿಲ್ಲ. ಕಡೇಪಕ್ಷ ಅವರ ನಿವಾಸಸ್ಥಳವನ್ನಾದರೂ ಯಾರೂ ಅರಿಯರು.

ಆ ಅರಣ್ಯದಲ್ಲೇ ಒಬ್ಬ ಬಡವ, ಅವನ ಹೆಂಡತಿ, ಮಗ ಆನಂದ ವಾಸಮಾಡುತ್ತಿದ್ದರು. ಆನಂದ ಕೊಂಚ ದೊಡ್ಡವನಾದಮೇಲೆ ಅವನಿಗೆ ಈ ಕಳ್ಳರ ವಿಷಯ ತಿಳಿಯಿತು. ತನಗೊಂದು ಹರಿದ ಅರಿವೆಯಾದರೂ ಇಲ್ಲದಿರಲು ಆ ಕಳ್ಳರೇ ಕಾರಣರೆಂದು ತಿಳಿಯಿತು. ಆ ಕಳ್ಳರಿಂದಲೇ ಸುತ್ತಮುತ್ತಲಿದ್ದ ಜನ ಬಡತನವನ್ನು ಅನುಭವಿಸುತ್ತಿರುವರೆಂದೂ ಅರಿತನು. ಹೇಗಾದರೂ ಈ ಕಳ್ಳರ ಕಾಟವನ್ನು ತಪ್ಪಿಸಬೇಕೆಂದು ಅವನು ನಿರ್ಧರಿಸಿದನು. "ಮಗೂ ನೀನಿನ್ನೂ ಚಿಕ್ಕವನು. ಕಳ್ಳತನದಲ್ಲಿ ಪಳಗಿದ ಆ ದರೋಡೆಕಾರರನ್ನು ನೀನೆಂತು ಹಿಡಿಯಬಲ್ಲೆ? ಅವರು ಸುಲಭವಾಗಿ ನಿನ್ನ ಪ್ರಾಣವನ್ನು ತೆಗೆಯಬಲ್ಲರು" ಎಂದರು ತಂದೆ ತಾಯಿಗಳು.

ಆದರೆ ಆನಂದ ತನ್ನ ಹಠ ಬಿಡಲಿಲ್ಲ. ಎಂತಾದರೂ ಕಳ್ಳರನ್ನು ಅಡಗಿಸುವ ಆಕಾಂಕ್ಷೆ ಅವನಲ್ಲಿ ದಿನದಿನಕ್ಕೆ ಬಲವಾಗಿತ್ತು. ಒಂದು ದಿನ ಅವನು ತನ್ನ ತಂದೆ ತಾಯಿಗಳೊಂದಿಗೆ ತಾನು ಕಳ್ಳರಿರುವ ಸ್ಥಳವನ್ನು ಪತ್ತೆಹಚ್ಚಲು ಹೋಗುವುದಾಗಿ ಹೇಳಿ ಹೊರಟುಬಿಟ್ಟನು.

ಆನಂದನು ಅರಣ್ಯಮಾರ್ಗದಲ್ಲಿ ನಡೆಯುತ್ತಿರಲು ಪ್ರಚಂಡ ಬಿರುಗಾಳಿ ಬೀಸಲಾರಂಭಿಸಿತು. ಗಾಳಿಯೊಂದಿಗೆ ಮಳೆ ಬೇರೆ. ಮಳೆಯಲ್ಲಿ ತೊಯ್ದು, ದಾರಿಗಾಣದ ಗೊಂಡಾರಣ್ಯದಲ್ಲಿ ನಡೆಯುತ್ತಿರಲು, ಅನತಿದೂರದಲ್ಲಿ ಅವನಿಗೊಂದು ದೀಪದ ಬೆಳಕು ಕಾಣಿಸಿತು. ಆನಂದನು ಆ ದೀಪವಿದ್ದತ್ತ ಹೋದನು. ಅದೊಂದು ಭಾರಿ ಭವನ. ಅರಣ್ಯದ ನಡುವೆ ಅಂತಹ ಭಾರಿ ಭವನವಿರಬಹುದೆಂದು ಆನಂ

ಕೆ. ಪಿ. ಸೇರಿಗಾರ



ದನು ಕನಸಿನಲ್ಲೂ ಊಹಿಸಿರಲಿಲ್ಲ. ಅದೇ ಕಳ್ಳರು ವಾಸಿಸುತ್ತಿದ್ದ ಮನೆ. ಅದರ ಬಾಗಿಲು ಮುಚ್ಚಿತ್ತು. ಮೆಲ್ಲನೆ ಬಾಗಿಲು ತಟ್ಟಿದ ಆನಂದ. ಮುದುಕಿಯೊಬ್ಬಳು ಬಾಗಿಲು ತೆಗೆದಳು. ಆಗ ಆ ಭವನದಲ್ಲಿ ಮುದುಕಿಯ ಹೊರತು ಬೇರೆ ಯಾರೂ ಇರಲಿಲ್ಲ.

"ಅಜ್ಜಿ, ಹೊರಗೆ ಪ್ರಚಂಡವಾದ ಗಾಳಿ ಬೀಸುತ್ತಿದೆ; ಮಳೆ ಬೀಳುತ್ತಿದೆ. ಚಳಿ ಸಹಿಸಲಸಾಧ್ಯವಾಗಿದೆ. ನಾನು ಸ್ವಲ್ಪ ಒಳಗೆ ಬರಲೇ?" ಎಂದ ಆನಂದ.

"ಒಳಗೆ ಬಂದರೆ ನಿನ್ನ ಗತಿ ಇನ್ನಷ್ಟು ದುರ್ಭರವಾಗುತ್ತದೆ. ಒಳಗೆ ಬರಬೇಡ, ಮುಂದೆ ನಡಿ" ಎಂದಳು ಮುದುಕಿ. "ಯಾಕೆ ಅಜ್ಜಿ?" ಎಂದು ಕೇಳಿದ ಆನಂದ.



"ಯಾಕೆಂದು ಹೇಳಲಿ? ಇದು ಕಳ್ಳರ ರಹಸ್ಯಸ್ಥಳ. ನನ್ನನ್ನು ಅಪಹರಿಸಿ ತಂದು ನನ್ನಿಂದ ಚಾಕರಿ ಮಾಡಿಸಿಕೊಳ್ಳುತ್ತಿದ್ದಾರೆ ಆ ಪಾಪಿಗಳು! ಇವರಿಗೆ ದಯೆದಾಕ್ಷಿಣ್ಯಗಳಿಲ್ಲ. ಕಣ್ಣಿಗೆ ಕಂಡ ವ್ಯಕ್ತಿಯನ್ನು ದೋಚುವುದು ಅವರ ಕೆಲಸ. ಏನೂ ಇಲ್ಲದಿದ್ದರೆ ಪ್ರಾಣವನ್ನಾದರೂ ತೆಗೆಯಲು ಹಿಂತೆಗೆಯುವುದಿಲ್ಲ" ಎಂದಳು.

"ಹಾಳುಪ್ರಾಣ ಹೋದರೆ ಹೋಗಲಿ ಅಜ್ಜಿ. ಹೊರಗೆ ಚಳಿಯಲ್ಲಿ ಸಾಯುವುದಕ್ಕಿಂತಲೂ, ಹಾಯಾಗಿ ಬೆಚ್ಚನೆಮನೆಯಲ್ಲೇ ಪ್ರಾಣಬಿಡುತ್ತೇನೆ" ಎಂದು ಹೇಳುತ್ತಾ ಆನಂದನು ಮನೆಯೊಳಕ್ಕೆ ಪ್ರವೇಶಿಸಿದನು.

ಮನೆಯಲ್ಲಿ ಎಲ್ಲಿ ನೋಡಿದರೂ ರಾಶಿಗಟ್ಟಲೆ ಹಣ ಬಿದ್ದಿತ್ತು. ಆನಂದನು ಆ ಹಣದ ರಾಶಿಗಳ ನಡುವೆ ಜಾಗಮಾಡಿಕೊಂಡು ಮಲಗಿ ನಿದ್ರೆಮಾಡಲು ಪ್ರಯತ್ನಿಸಿದನು. ಅಷ್ಟರಲ್ಲಿ ಕಳ್ಳರು ಬಂದು ಆನಂದನನ್ನು ನೋಡಿ "ಯಾರಿವನು? ಇವನಬಳಿ ಹಣವೇನಾದರೂ ಇದೆಯೇ?" ಎಂದು ಅಜ್ಜಿಯನ್ನು ಕೇಳಿದರು.

"ಮೈಮೇಲೆ ಅರಿವೆಯೇ ಇಲ್ಲದಿರಲು ಹಣವೆಲ್ಲಿಂದ ಬರಬೇಕು" ಎಂದಳು ಅಜ್ಜಿ.

ಅವಳ ಮಾತಿಗೆ ಗಹಗಹಿಸಿ ನಕ್ಕು "ಹಾಗಾದರೆ ಇವನು ನನ್ನ ಪ್ರಾಂತದವನೇ ಇರಬೇಕು. ಇವನನ್ನು ಈಗಲೇ ಯಮಪುರಿಗೆ ಕಳುಹಿಸೋಣವೇ? ಇಲ್ಲ ನಾಳೆಯವರೆಗೆ ಚಿತ್ರಹಿಂಸೆಕೊಟ್ಟು, ನಂತರ ಪ್ರಾಣ ತೆಗೆ

ಯೋಣವೇ?'' ಎಂದು ಅವರು ಚರ್ಚಿಸಿದರು. ಆನಂದನು ಅವರ ಸಂಭಾಷಣೆ ಕೇಳಿ, ಇನ್ನು ತಡಮಾಡಿದರೆ ಮುಪ್ಪು ಖಂಡಿತವೆಂದು ಅರಿತು, ಕಳ್ಳರನ್ನು ಉದ್ದೇಶಿಸಿ "ಅಯ್ಯಾ, ನನಗೆ ಬಾಲ್ಯದಿಂದಲೂ ಚೋರನಾಗಬೇಕೆಂಬ ಅಭಿಲಾಷೆ. ಆದುದರಿಂದ ನಿಮ್ಮ ನೌಕರನಾಗಿ ಕೆಲಸಮಾಡಿಕೊಂಡಿರಲು ಅವಕಾಶ ಕೊಡಿ'' ಎಂದು ವಿನಮ್ರನಾಗಿ ಬೇಡಿಕೊಂಡನು.

ಅವನ ಮಾತನ್ನು ಕೇಳಿದ ಕಳ್ಳರು ಸಂತೋಷಿಸಿ "ಹಾಗೆ ಹೇಳು ಮತ್ತೆ. ನಾವು ಆಗಾಗ ಹೊಸಬರನ್ನು ನಮ್ಮ ತಂಡಕ್ಕೆ ಸೇರಿಸಿಕೊಳ್ಳುವುದುಂಟು. ಆದರೆ ನಮ್ಮ ತಂಡದ ಸದಸ್ಯನಾಗಲು ಕೆಲವು ಪರೀಕ್ಷೆಗ ಳಲ್ಲಿ ತೇರ್ಗಡೆ ಹೊಂದಬೇಕು. ಶಿಷ್ಯನಾಗ ಬಯಸುವವನು ಯಾರಿಗೂ ಹಾನಿಮಾಡದೆ, ಯಾರಕೈಗೂ ಸಿಕ್ಕದೆ ಒಂದು ಕಳ್ಳತನ ಮಾಡ ಬೇಕು. ಅಂತಹ ಎರಡು ಚೋರಿಗಳನ್ನು ಮಾಡಿದರೆ ನಮ್ಮ ಸರೀಕನಾಗುವನು. ಮೂರು ಕಳ್ಳತನಗಳನ್ನು ಮಾಡಿದರೆ ನಮ್ಮ ನಾಯಕನಾಗುತ್ತಾನೆ. ಒಂದು ವಿಷಯ ಮಾತ್ರ ಜ್ಞಾಪಕವಿರಲಿ. ನೀನು ಯಾರ ಸೊತ್ತನ್ನು ಅಪಹರಿಸುವೆಯೋ ಅವರಿಗೆ ಚಾಚೂ ತಿಳಿಯದಂತೆ ಕಳ್ಳತನವಾಗಬೇಕು. ಅವರಿಗೆ ಯಾವುದೇ ವಿಧವಾದ ಹಾನಿಯೂ ಆಗಬಾರದು.'' ಎಂದರು.

ಆನಂದನು ಸರಿ ಎಂದು ಒಪ್ಪಿಕೊಂಡನು. ಅವನು ಮಾರನೇಯ ದಿನ ಮುಂಜಾನೆ ಕಳ್ಳ ರಿದ್ದ ಮನೆಯಿಂದ ಹೊರಟನು. ಹೊರಡು





ಎಕ್ಕಡವನ್ನು ತೆಗೆದುಕೊಂಡು ಅಡ್ಡದಾರಿಯಿಂದ ಮೊದಲೇ ಹೋಗಿ, ಅದನ್ನು ಮತ್ತೆ ಆ ರೈತನು ಬರುವ ದಾರಿಗೆ ಅಡ್ಡವಾಗಿಟ್ಟನು.

ಕೊಂಚ ಹೊತ್ತಿಗೆ ಅತ್ತ ಬಂದ ರೈತನು ಎಕ್ಕಡವನ್ನು ಕಂಡು ಹಿಂದೆ ತಾನು ಕಂಡ ಪಾದರಕ್ಷೆಯ ಜೊತೆಯೆಂದು ಭಾವಿಸಿದನು. ಅವನು ತನ್ನ ಎತ್ತನ್ನು ಅಲ್ಲಿದ್ದ ಮರಕ್ಕೆ ಕಟ್ಟಿ ಎಕ್ಕಡ ತರಲು ಹಿಂದಕ್ಕೆ ಹೋದನು. ಆನಂದನು ಆ ಎತ್ತನ್ನು ಬಿಚ್ಚಿಕೊಂಡು ಕಳ್ಳರ ತಂಡವಿದ್ದ ಮನೆಯನ್ನು ಸೇರಿಕೊಂಡನು.

ಆನಂದನ ಕೈಚಳಕವನ್ನು ಕೇಳಿದ ಕಳ್ಳರು ಸಂತೋಷಿಸಿ ಅವನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿದರು. ಆನಂದನಿಗೆ ಕಳ್ಳರ ನಾಯಕನಾಗುವ ಹೆಬ್ಬಯಕೆಯಿತ್ತು. ಇದೇರೀತಿ ಮತ್ತೆರಡು ಕಳ್ಳತನಗಳನ್ನು ಮಾಡಲು ನಿರ್ಧರಿಸಿದನು. ಕೂಡಲೇ ಒಂದು ಹಗ್ಗವನ್ನು ತೆಗೆದುಕೊಂಡು ಮತ್ತೆ ಅಡವಿಗೆ ಓಡಿದನು.

ಅತ್ತ ಅರಣ್ಯದಲ್ಲಿ ರೈತನು ತನ್ನ ಎತ್ತನ್ನು ಕಾಣದೆ ವ್ಯಾಕುಲಗೊಂಡು, ಮನೆಗೆ ಹಿಂತಿರುಗಿ ಮತ್ತೊಂದು ಎತ್ತನ್ನು ಅಟ್ಟಿಕೊಂಡು ಬರುತ್ತಿದ್ದನು. ಆನಂದನು ಇದನ್ನು ಕಂಡು ರೈತನು ಬರುವ ದಾರಿಯಲ್ಲಿ ಒಂದು ಮರವನ್ನೇರಿ, ಅದರ ಕೊಂಬೆಗೆ ಹಗ್ಗವನ್ನು ಕಟ್ಟಿ ಅದರಲ್ಲಿ ತನ್ನ ಎರಡು ಕೈಗಳನ್ನು ಇಳಿಬಿಟ್ಟು ಸತ್ತುಹೋದವನಂತೆ ನೇತಾಡುತ್ತಿದ್ದನು.

ಹಾಗೆ ನೇತಾಡುತ್ತಿದ್ದ ಆನಂದನನ್ನು ಕಂಡು ರೈತನು "ಭೇಷ್, ಇವನಿಗೆ ತಕ್ಕ

ವಾಗ ಅವನು ಆ ಮನೆಯಲ್ಲಿದ್ದ ಒಂದು ಪಸಂದಾದ ಪಾದರಕ್ಷೆಯನ್ನು ತೆಗೆದುಕೊಂಡನು. ಆ ಪಾದರಕ್ಷೆಯನ್ನು ಒಂದು ಕಾಲು ದಾರಿಯಲ್ಲಿರಿಸಿ, ಆನಂದನು ಸಮೀಪದಲ್ಲಿದ್ದ ಒಂದು ಪೊದೆಯಲ್ಲಿ ಅಡಗಿ ಕುಳಿತುಕೊಂಡನು.

ಕೊಂಚಹೊತ್ತಿನ ನಂತರ ರೈತನೊಬ್ಬನು ಎತ್ತನ್ನು ಮಾರಲು ಪೇಟೆಗೆ ಆ ದಾರಿಯಲ್ಲಿ ಹೊಡೆದುಕೊಂಡು ಹೋಗುತ್ತಿದ್ದನು. ದಾರಿಯಲ್ಲಿ ಬಿದ್ದಿದ್ದ ಪಾದರಕ್ಷೆಯನ್ನು ಕಂಡು ರೈತನು "ಸೊಗುಸಾದ ಮೆಟ್ಟು. ಆದರೆ ಒಂದೇ ಒಂದಿದೆ. ಜೊತೆಯಿದ್ದಿದ್ದರೆ ಸೊಗುಸಾಗಿತ್ತು" ಎಂದುಕೊಂಡು ಮುಂದಕ್ಕೆ ನಡೆದನು. ಅವನು ಕಣ್ಮರೆಯಾದ ಕೂಡಲೇ ಆನಂದನು ಪೊದೆಯಿಂದ ಹೊರಬಿದ್ದು ಆ

ಶಾಸ್ತಿಯಾಗಿದೆ. ಇದೇ ರೀತಿ ಇಲ್ಲಿರುವ ಕಳ್ಳರಿಗೆಲ್ಲಾ ಶಿಕ್ಷೆಯಾದರೆ ಜನಬಾಳಿಯಾರು" ಎಂದುಕೊಂಡು ಮುಂದಕ್ಕೆ ನಡೆದನು.

ರೈತನು ಕಣ್ಮರೆಯಾದ ಕೂಡಲೇ ಆನಂದನು ತನ್ನ ಕೈಗಳನ್ನು ಹಗ್ಗದ ಕುಣಿಕೆಯಿಂದ ಎಳೆದುಕೊಂಡು, ಅಡ್ಡದಾರಿ ಹಿಡಿದು ಮೊದಲೇ ಹೋಗಿ ಮತ್ತೊಂದು ಮರಕ್ಕೆ ನೇತಾಡುತ್ತಿದ್ದನು. ರೈತನು ಅವನನ್ನು ಕಂಡು "ಮತ್ತೊಬ್ಬನಿಗೂ ಶಿಕ್ಷೆಯಾಯಿತು, ಸಂತೋಷ" ಎಂದು ಮುನ್ನಡೆದನು.

ಆನಂದನು ಕಾಲು ಹಾದಿಯಿಂದ ಮತ್ತಷ್ಟು ಮುಂದೆ ಹೋಗಿ ಮೂರನೇಬಾರಿ ಮರಕ್ಕೆ ನೇತಾಡುತ್ತಿದ್ದನು. ಅದನ್ನು ನೋಡಿ ರೈತನು ಅಚ್ಚರಿಗೊಂಡನು. "ಎಲಾ, ಇವನು ಹಿಂದೆ ನಾನು ಕಂಡ ವ್ಯಕ್ತಿಯಂತೆಯೇ ಕಾಣಿಸುತ್ತಿದ್ದಾನೆ! ಒಬ್ಬನೇ ಇಷ್ಟೊಂದು ಮರಗಳಮೇಲೆ ಸಾಯುವುದೇಂದರೇನು? ಇದರಲ್ಲೇನೋ ರಹಸ್ಯವಿರಬೇಕು" ಎಂದುಕೊಂಡು ಎತ್ತನ್ನು ಮರಕ್ಕೆ ಕಟ್ಟಿ ತನ್ನ ಸಂದೇಹವನ್ನು ನಿವಾರಿಸಿಕೊಳ್ಳಲು ಹಿಂದಕ್ಕೆ ಓಡಿದನು.

ರೈತನು ಅತ್ತಹೋದ ಕೂಡಲೇ ಆನಂದನು ತನ್ನ ಕಟ್ಟುಗಳನ್ನು ಬಿಚ್ಚಿಕೊಂಡು, ಹಗ್ಗವನ್ನು ಭುಜದಮೇಲೆ ಹಾಕಿಕೊಂಡು ಎತ್ತನ್ನು ಕಳ್ಳರ ವಾಸಸ್ಥಳಕ್ಕೆ ಅಟ್ಟಿಕೊಂಡು ಹೋದನು. "ಈಗ ನೀನು ನಮಗೆ ಸರಿಸಮಾನನು" ಎಂದು ಹೊಗಳುತ್ತಾ ಕಳ್ಳರು ಅವನ ಭುಜವನ್ನು ತಟ್ಟಿದರು.



ಅತ್ತ ರೈತನಿಗೆ ತುಂಬಾ ವ್ಯಥೆಯಾಯಿತು. ಇನ್ನು ಅವನಬಳಿ ಒಂದೇ ಒಂದು ಎತ್ತು ಉಳಿದಿತ್ತು. ಅವನಿಗೆ ಜರೂರಾಗಿ ಹಣ ಬೇಕಾಗಿತ್ತು. ಎತ್ತನ್ನು ಮಾರದೆ ವಿಧಿಯಿರಲಿಲ್ಲ. ಆದುದರಿಂದ ಅವನು ಮತ್ತೆ ಮನೆಗೆ ಹೋಗಿ ಉಳಿದಿದ್ದ ಎತ್ತನ್ನು ಸಾಗಿಸಿಕೊಂಡು ಬಹು ಹುಷಾರಾಗಿ ಕಾಡಿನಲ್ಲಿ ನಡೆದುಕೊಂಡು ಬರುತ್ತಿದ್ದನು. ಅವನು ಕೊಂಚದೂರ ಹೋಗಲು, ದಾರಿಯ ಪಕ್ಕದಲ್ಲಿದ್ದ ಪೊದೆಗಳ ಹಿಂದಿನಿಂದ ಗುಟುರು ಹಾಕಿದ ಧ್ವನಿ ಕೇಳಿಸಿತು.

"ಓ, ಗುಟುರು ಹಾಕುವ ಶಬ್ದ ಕೇಳಿಸುತ್ತಿದೆ. ಅದು ನನ್ನ ಎತ್ತಿನ ಧ್ವನಿಯೇ ಇರಬೇಕು. ಹಗ್ಗ ಕಿತ್ತುಕೊಂಡು ಮೇಯಲು ಹೋಗಿಬಿಟ್ಟದೆ. ಎರಡು ಎತ್ತುಗಳೂ ಅಲ್ಲೇ

ಇರಬಹುದು" ಎಂದುಕೊಂಡು ರೈತನು ತನ್ನ ಮೂರನೇ ಎತ್ತನ್ನು ಅಲ್ಲಿಯೇ ಇದ್ದ ಮರಕ್ಕೆ ಕಟ್ಟಿ ಹಾಕಿ, ಪೊದೆಗಳ ಹಿಂದೆ ತನ್ನ ಎತ್ತುಗಳನ್ನು ಹುಡುಕಲು ಹೋದನು.

ಹಾಗೆ ಪೊದೆಯ ಹಿಂದಿನಿಂದ ಗುಟುರಿನ ಶಬ್ದಮಾಡಿದ್ದು ಆನಂದ. ರೈತನು ಪೊದೆಯೊಚೆ ಮರೆಯಾದ ಕೂಡಲೇ ಅವನು ಹೊರಗೆಬಂದು ಮೂರನೇ ಎತ್ತನ್ನು ಸಹ ಕಳ್ಳರ ಭವನಕ್ಕೆ ಹೊಡೆದುಕೊಂಡು ಹೋದನು.

ಅವನ ಚಾತುರ್ಯವನ್ನು ಕೇಳಿ ತಿಳಿದ ಕಳ್ಳರು ತಮ್ಮ ನಿಯಮದ ಪ್ರಕಾರ ಆನಂದನನ್ನು ತಮ್ಮ ನಾಯಕನನ್ನಾಗಿ ಆರಿಸಿಕೊಂಡರು. "ಇನ್ನು ಮೇಲೆ ನಮ್ಮ ಕಾರ್ಯಕ್ರಮವನ್ನು ನೀನೇ ನಿರ್ಧರಿಸಬೇಕು. ನಿನ್ನ ಆಜ್ಞಾನುವರ್ತಿಗಳು ನಾವು" ಎಂದು ಅವರು ಆನಂದನಿಗೆ ಹೇಳಿದರು.

"ಸರಿ, ನಾಳೆ ರಾತ್ರಿ ನಾವು ಒಂದು ಮನೆಗೆ ಕನ್ನ ಹಾಕಬೇಕು. ಅದೊಂದು ಗುಡಿಸಿಲಂತಿದ್ದರೂ, ಅಲ್ಲಿ ನಮಗೆ ಬೇಕಾದಷ್ಟು ನಗನಾಣ್ಯಗಳು ಸಿಗುತ್ತವೆ." ಎಂದು ಆನಂದನು ತನ್ನ ಸ್ವಂತ ಮನೆಯ ಗುರುತು ಹೇಳಿದನು. ಕಳ್ಳರು ಒಪ್ಪಿಕೊಂಡರು.

ತರುವಾಯ ಆನಂದನು ಅವರ ಕಣ್ಣು ತಪ್ಪಿಸಿ, ಮನೆಗೆ ಹೋಗಿ ತಂದೆಯೊಂದಿಗೆ "ಅಪ್ಪಾ, ನಾಳೆ ನಮ್ಮ ಮನೆಗೆ ಕಳ್ಳರು ಬೀಳುತ್ತಾರೆ. ನೀನು ನಗರಕ್ಕೆ ಹೋಗಿ ರಾಜಭಟರಿಗೆ ತಿಳಿಸಿ, ಅವರನ್ನು ಮನೆಯಲ್ಲಿ ತಂದಿರಿಸುವುದು ಉತ್ತಮ. ಕಳ್ಳರೆಲ್ಲ ಒಟ್ಟಿಗೆ ನಮ್ಮ ಬಲೆಗೆ ಬೀಳುತ್ತಾರೆ" ಎಂದ.

ಕಳ್ಳರು ಮಾರನೇಯದಿನ ರಾತ್ರಿ ಆನಂದನ ಮನೆಗೆ ನುಗ್ಗಿ, ಅಲ್ಲಿ ಅಡಗಿಕೊಂಡಿದ್ದ ರಾಜಭಟರ ಕೈಗೆ ಸಿಕ್ಕಿಬಿದ್ದರು. ಅಂದಿನಿಂದ ಆ ಪ್ರಾಂತ ಕಳ್ಳರ ಹಾವಳಿಯಿಂದ ಪಾರಾಯಿತು. ಪ್ರಜೆಗಳು ಆನಂದನೊಂದಿಗೆ ಕಳ್ಳರಿದ್ದ ಮನೆಗೆ ಹೋಗಿ ತಮ್ಮ ಸೊತ್ತನ್ನು ಪತ್ತೆಹಚ್ಚಿ ತೆಗೆದುಕೊಂಡರು.

ಆನಂದನು ರೈತನಿಗೆ ಅವನ ಎತ್ತುಗಳನ್ನು ಹಿಂತಿರುಗಿಸಿದನು. ನಂತರ ತನ್ನ ತಂದೆತಾಯಿಗಳನ್ನು ಕಳ್ಳರು ವಾಸಿಸುತ್ತಿದ್ದ ಭವನಕ್ಕೆ ಕರೆದುಕೊಂಡು ಹೋಗಿ, ಅಲ್ಲೇ ನೆಲಸಿದನು.






## 12

[ರೂಪಧರನು ದೇಶವಲ್ಲದ ದೇಶಗಳಲ್ಲಿ ನಾನಾ ಕಷ್ಟಗಳನ್ನು ಪಟ್ಟು ಸ್ವದೇಶವನ್ನು ಸೇರಿಕೊಳ್ಳುವ ಸಮಯಕ್ಕೆ ಅವನ ಕುಮಾರ ಧೀರಮತಿ ತಂದೆಯ ಇರುವಿಕೆಯನ್ನು ತಿಳಿಯಲು ನಿಶ್ಚಯಿಸಿಕೊಂಡ. ತನ್ನ ತಾಯಿಯನ್ನು ಮದ.ವೆಯಾಗಲೆಳಸಿದ ಅನೇಕ ರಾಜಕುಮಾರರು ತನ್ನ ಮನೆಯಲ್ಲಿ ಗುಲ್ಲೆಬ್ಬಿಸುವುದು ಅವನಿಗೆ ಹಿಡಿಸಲಿಲ್ಲ ಅದಕ್ಕಾಗಿ ಅವನು ಒಂದು ಸಮಾವೇಶ ನಡೆಸಿದರೂ ಪ್ರಯೋಜನವಾಗಲಿಲ್ಲ. ಧೀರಮತಿ ತಂದೆಯ ವಿಷಯವನ್ನು ತಿಳಿಯಲು ಇಥಕಾದಿಂದ ಪೈಲಾಸ್‌ಗೆ ನೌಕಾಪ್ರಯಾಣ ಹೊರಟನು.]

ಆ ನೌಕೆ ಪೈಲಾಸ್ ತೀರವನ್ನು ತಲಪುವಾಗ ಮರುದಿನ ಬೆಳಗಾಯಿತು. ಸಮುದ್ರತೀರದಲ್ಲಿ ಪ್ರಜೆಗಳು ವರುಣದೇವನಿಗೆ ಕಪ್ಪು ಎತ್ತುಗಳನ್ನು ಬಲಿಕೊಡುತ್ತಿದ್ದರು.

ಅಲ್ಲಿ ಒಂಬತ್ತು ಗುಂಪುಗಳಿದ್ದುವು. ಒಂದೊಂದು ಗುಂಪಿನಲ್ಲಿ ಐನೂರುಮಂದಿಗಳಿದ್ದರು. ತೀರದಲ್ಲಿ ಉದ್ದಕ್ಕೂ ಒಂಬತ್ತು ಓಳಿಯೊಲೆಗಳಲ್ಲಿ ಭಾರಿ ಬೆಂಕಿ ಉರಿಯುತ್ತಿತ್ತು. ದೊಡ್ಡದಾದ ಅಡಿಗೆ ಸಾಗುತಿತ್ತು ನಾವಿಕರು ತೆರೆಚಾಪೆ ಇಳಿಸಿ ಲಂಗರು ಹಾಕಿದಮೇಲೆ, ಧೀರಮತಿ ಮತ್ತು ಅವನೊಂದಿಗೆ ಬಂದ ವೃದ್ಧ ಸಹನನೂ ಇಳಿದು ಬಂದು ತೀರದಲ್ಲಿ ನಡೆಯತೊಡಗಿದರು.

"ನಾವೀಗ ನವದ್ಯೋತನನ್ನು ನೋಡಲು ಹೋಗುತ್ತೇವೆ. ನೀನು ದಾಕ್ಷಿಣ್ಯಬಿಟ್ಟು ಅವನೊಂದಿಗೆ ನಮ್ಮ ಕೆಲಸ ಹೇಳಿಬಿಡು. ನಿನ್ನ

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ



ತಂದೆಯ ಸಮಾಚಾರಕೇಳು. ನಿನ್ನ ತಂದೆಯ ಸುದ್ದಿ ಅವನಿಗೇನಾದರೂ ಗೊತ್ತಿದೆಯೆ? ಅವನು ಸತ್ತಿರುವನೊ? ಸತ್ತಿದ್ದರೆ ಯಾವಾಗ ಎಲ್ಲಿ? ಎಂಬ ವಿವರಗಳೆಲ್ಲಾ ನವದ್ಯೋತನಿಗೆ ತಿಳಿದಿದೆಯೋ ಕೇಳಬೇಕು. ನವದ್ಯೋತನು ಬಹಳ ದೊಡ್ಡಮನುಷ್ಯ. ನಿಜ ತಿಳಿಯುವವನು. ಮುಚ್ಚುಮರೆಯುವನಲ್ಲ. ಅವನೊಡನೆ ನೀನೇ ಪ್ರಶ್ನೆಮಾಡುವುದುತ್ತಮ.'' ಎಂದು ಸಹನನು ಧೀರಮತಿಗೆ ಹೇಳಿದ.

'' ನಾನಿನ್ನೂ ಚಿಕ್ಕವ. ದೊಡ್ಡವರೊಂದಿಗೆ ಮಾತಾಡುವ ಕ್ರಮಗೊತ್ತಿಲ್ಲ. ಇದೇ ನನಗಿರುವ ಭಯ '' ಎಂದ ಧೀರಮತಿ. ಸಹನನು ಅವನಿಗೆ ಧೈರ್ಯ ಹೇಳಿದನು. ಅವರಿಬ್ಬರೂ ನವದ್ಯೋತ ಮತ್ತು ಅವನ ಕುಮಾರರು ವಾಸಮಾಡುವ ಶಿಬಿರದಕಡೆಗೆ ನಡೆದರು. ಹೊಸಬರು ಬರುವುದನ್ನು ನೋಡಿ ನವದ್ಯೋತನ ಕುಮಾರರು ಎದುರುಹೋಗಿ ಧೀರಮತಿ, ಸಹನರಿಗೆ ಸ್ವಾಗತ ಹೇಳಿದರು. ತರುವಾಯ ಅವರು ನವದ್ಯೋತನ ಪಕ್ಕದಲ್ಲಿ ಮರಳಿನಮೇಲೆ ಮೆತ್ತಗಿನ ಚರ್ಮವನ್ನು ಹಾಸಿ ಅದರಮೇಲೆ ಅತಿಥಿಗಳನ್ನು ಕೂಡಿಸಿದರು. ಆಹಾರವನ್ನೂ ದ್ರಾಕ್ಷಾರಸವನ್ನೂ ತಂದು ಕೊಟ್ಟರು.

ಅತಿಥಿಗಳ ಕ್ಷುಧಾಶಾಂತಿಯಾದಮೇಲೆ ನವದ್ಯೋತನು ಅವರನ್ನು ಕುರಿತು—''ಈಗ ಹೇಳಿ, ನೀವು ಯಾರು? ಯಾವದೇಶದಿಂದ ಸಮುದ್ರದಾಟಿ ಬಂದಿರುವಿರಿ? ಮುಖ್ಯವಾಗಿ ಇಲ್ಲಿಗೇ ಬಂದಿರಾ? ಅಲ್ಲ ಬೇರೆಲ್ಲಿಗೋ



ಹೋಗುತ್ತಾ ದಾರಿಯಲ್ಲಿ ನಮ್ಮ ದೇಶವನ್ನು ನೋಡಿ ಇಳಿದಿರಾ?'' ಎಂದು ಕೇಳಿದ.

ಧೀರಮತಿ ಧೈರ್ಯದಿಂದ ಉತ್ತರ ಕೊಟ್ಟ.

"ಮಹಾರಾಜ, ನಮ್ಮದು ಇಥಾಕಾ. ಸ್ವಂತ ಕೆಲಸಕ್ಕಾಗಿಯೇ ಇಲ್ಲಿಗೆ ಬಂದಿದ್ದೇನೆ. ಟ್ರಾಯ್ ಯುದ್ಧರಂಗದಲ್ಲಿ ನಿಮ್ಮ ಜತೆ ಯುದ್ಧಮಾಡಿದ ನನ್ನ ತಂದೆ ರೂಪಧರರ ಸಮಾಚಾರ ತಿಳಿಯುವ ನಿಮಿತ್ತವಾಗಿ ಬಂದಿದ್ದೇನೆ. ಯುದ್ಧಕ್ಕೆ ಹೋಗಿದ್ದ ಎಲ್ಲರ ಸಮಾಚಾರವೂ ತಿಳಿದುಬಂದಿದೆ. ಆದರೆ ನನ್ನ ತಂದೆಯ ಸಮಾಚಾರಮಾತ್ರ ಹೇಳುವವರಿಲ್ಲ. ಅವರು ಸತ್ತುಹೋಗಿರುವ ಸಂಗತಿ ನಿಮಗೆ ಖಂಡಿತ ತಿಳಿದಿದ್ದರೆ ಆ ಸಂಗತಿ ನನಗೆ ದಯಮಾಡಿ ಹೇಳಿರಿ. ನೀವೆಲ್ಲರೂ ಯುದ್ಧರಂಗದಲ್ಲಿ ಎಷ್ಟೋ ಕಷ್ಟಗಳನ್ನು ಹಂಚಿಕೊಂಡಿರುವಿರಿ. ಆದುದರಿಂದ ನಿಮಗೆ ತಿಳಿದಿರುವ ವಿಷಯಗಳನ್ನು ಮರೆಮಾಜದೆ ತಿಳಿಸಬೇಕು.''

ಇದನ್ನು ಕೇಳಿ ನವದ್ಯೋತನು ಹೀಗೆ ಪ್ರತ್ಯುತ್ತರವಿತ್ತನು :

"ಕಂದಾ, ಒಂದೇಬಾರಿಗೆನಡೆದ ವಿಷಯಗಳನ್ನೆಲ್ಲಾ ನೆನಪಿಗೆ ಬರಿಸಿದೆ. ವಜ್ರಕಾಯನ ನಾಯಕತ್ವದಲ್ಲಿ ನಾವೆಲ್ಲಾ ಹಡಗುಗಳಲ್ಲಿ ಹೋಗಿ ಟ್ರಾಯ್ ನಗರಕ್ಕೆ ಮುತ್ತಿಗೆಹಾಕಿ ಒಂಬತ್ತುವರ್ಷ ಅತಿ ಕ್ರೂರವಾದ ಯುದ್ಧ ಮಾಡಿದೆವು. ನಮ್ಮ ಯೋಧರೆಷ್ಟೋಮಂದಿ ಆ ಯುದ್ಧರಂಗದಲ್ಲಿ ಪ್ರಾಣಸಮರ್ಪಣೆ ಮಾಡಿದರು. ಆ ಘಟನೆಗಳನ್ನೆಲ್ಲಾ ಹೇಳಹೋದರೆ ಐದಾರುವರ್ಷ ಹಿಡಿದೀತು.






ಒಂಬತ್ತುವರ್ಷ ಎಷ್ಟೋ ಕಷ್ಟಪಟ್ಟಮೇಲೆ, ಕಟ್ಟಕಡೆಗೆ ದೈವಕೃಪೆಯಿಂದ ವಿಜಯಗಳಿಸಿದೆವು. ಯುದ್ಧತಂತ್ರಗಳಲ್ಲಿ ನಿನ್ನ ತಂದೆಗೆ ಸಮಾನನೊಬ್ಬನೂ ಇಲ್ಲ. ನಮ್ಮಿಬ್ಬರನಡುವೆ ಒಂದು ಸಾರಿ ಕೂಡಾ ಅಭಿಪ್ರಾಯಭೇದ ಬಂದುದಿಲ್ಲ. ನಮ್ಮ ಸಲಹೆಗಳು ಯಾವಾಗಲೂ ಒಂದೇ ವಿಧವಿರುತ್ತಿದ್ದುವು. ಆಗುವುದೆಲ್ಲಾ ಆಗಿಹೋಯಿತು. ಹಿಂತಿರುಗುವ ಪ್ರಯಾಣಕ್ಕೆ ಪ್ರಾರಂಭಿಸಿದಾಗ ನಮ್ಮೊಳಗೆ ಕಕ್ಷಿಗಳು ಹುಟ್ಟಿಕೊಂಡುವು. ರಾರಾಜನಿಗೂ ಪ್ರತಾಪನಿಗೂ ನಡುವೆ ಅಭಿಪ್ರಾಯಭೇದ ವೇರ್ಪಟ್ಟಿತು. ಮಾತಿಗೆಮಾತುಹೊರಟಿತು. ಮತ್ತೇನಿದೆ? ಉಳಿದ ಯೋಧರೆಲ್ಲಾ ಎರಡು ಭಾಗವಾಗಿ ಒಡೆದು ಆ ಅಣ್ಣತಮ್ಮಂದಿ



ರೊಳಗೆ ಒಬ್ಬೊಬ್ಬರ ಪಕ್ಷಹಿಡಿದರು. ಮರುದಿನ ಬೆಳಗ್ಗೆ ಅರ್ಧಮಂದಿಗಳು ಹಡಗುಗಳನ್ನೇರಿ ಪ್ರತಾಪನಹಿಂದೆ ಹೊರಟೆವು. ಉಳಿದರ್ಧಮಂದಿಗಳು ರಾರಾಜನೊಂದಿಗೆ ದೇವತೆಗಳನ್ನು ಆರಾಧಿಸಲು ಅಲ್ಲಿಯೇ ಉಳಿದರು. ನಾವು ಟೆನೆಡೋಸಿಗೆ ತಲಪುತ್ತಲೇ ನಿನ್ನ ತಂದೆ ತಾನು ಹಿಂದಿರುಗಿ ಹೋಗುತ್ತೇನೆಂದ. ಅವನೊಂದಿಗೆ ಮತ್ತೆ ಕೆಲವರೂ ಹೊರಟರು. ನಾನೂ ದೇವಮಯನೂ ಮತ್ತೆ ಕೆಲವರೂ ನೇರಾಗಿ ನಮ್ಮ ನಮ್ಮ ಮನೆ ಸೇರಿಕೊಂಡೆವು. ಇದು ನಡೆದ ಕಥೆ. ಮಗೂ, ಉಳಿದವರ ಸಂಗತಿ ನನಗೆ ಗೊತ್ತಿಲ್ಲ. ವಜ್ರಕಾಯನ ಮಗ ನವಯೋಧನೂ ಅವನ ಅನುಚರರೂ ಕ್ಷೇಮವಾಗಿ ಮನೆಸೇರಿರುವರೆಂದು ಕೇಳಿದ್ದೇನೆ. ಮತ್ತೆ ಕೆಲವರುಕೂಡಾ ಅವರವರ ದೇಶ ಸೇರಿದ್ದಾರೆಂದೂ ಗೊತ್ತಾಗಿದೆ. ರಾರಾಜನು ಸ್ವದೇಶವನ್ನು ಸೇರಿಕೊಂಡಮೇಲೆ, ಅಜಬಲನು ರಾರಾಜನ ಹೆಂಡತಿಯೊಂದಿಗೆ ತಂತ್ರ ಮಾಡಿ ಅವನನ್ನು ದಾರುಣವಾಗಿ ಹತ್ಯೆ ಮಾಡಿದ ವಿಷಯ ನೀನು ಕೇಳಿರಬಹುದು. ರಾರಾಜನ ಮಗ ಬಹಳ ಗಟ್ಟಿಗ. ಆತ ಅವಕಾಶನೋಡಿ ಅಜಬಲನನ್ನು ಕೊಂದು ತನ್ನ ತಂದೆಯ ಹತ್ಯಮಾಡಿದ ದ್ರೋಹಿಯ ಹಗೆಯನ್ನು ತೀರಿಸಿಕೊಂಡ."

ಧೀರಮತಿಯೆಂದ: "ಅವನೆಷ್ಟು ಅದೃಷ್ಟಶಾಲಿ! ನನ್ನ ತಾಯಿಯನ್ನು ಮದುವೆಯಾಗಲು ನಮ್ಮ ಮನೆಗೇ ಬಂದು ಸೇರಿ

ಕೊಂಡು ಗಲಾಟೆ ಮಾಡುವವರಮೇಲೆ ನಾನು ಯಾವಾಗ ಹಗೆ ತೀರಿಸಿಕೊಳ್ಳುವೆನೊ!" ಧೀರ ಮತಿ ನಿಟ್ಟುಸಿರಿಟ್ಟ.

"ಹೌದು ಮಗು. ನಿನ್ನ ಮನೆಯನ್ನು ಸೇರಿರುವ ದುರ್ಮಾರ್ಗಿಗಳ ವಿಷಯ ನಾನೂ ಕೇಳಿದ್ದೇನೆ. ನೀನು ಅವರನ್ನೇಕೆ ಸಹಿಸಿಕೊಳ್ಳ ಬೇಕು? ಅವರೆಲ್ಲರೂ ನಿನ್ನ ಶತ್ರುಗಳೇನು? ಆದರೂ ಆ ಬುದ್ಧಿಮತೀದೇವಿಯ ಅನು ಗ್ರಹ ನಿನ್ನಮೇಲೆಬಿದ್ದರೆ ನಿನ್ನ ತಂದೆಯಂತೆ ನೀನುಕೂಡಾ ಬೇಗದಲ್ಲೇ ನಿಮ್ಮ ಶತ್ರುಗಳ ನ್ನೆಲ್ಲಾ ನಿರ್ಮೂಲಿಸಬಲ್ಲೆ. ಕಾಲಬರಬೇಕು." ಎಂದ ನವದ್ಯೋತ.

ಅವರು ಮಾತಾಡುತ್ತಿರುವಾಗಲೇ ಹೊತ್ತು ಮುಳುಗಿತು. ಧೀರಮತಿ ತನ್ನ ನೌಕೆಗೆ ಹೋಗಲು ಎದ್ದನು. ಆದರೆ ನವದ್ಯೋತನು ಒಪ್ಪಿಕೊಳ್ಳಲಿಲ್ಲ.

"ರೂಪಧರನ ಕುಮಾರನು ರಾತ್ರಿಯಲ್ಲಿ ಹಡಗಿನಲ್ಲಿ ಮಲಗುವುದೆ? ನನಗೆ ಮನೆ ಯಿಲ್ಲವೆ? ಹಾಸಿಗೆಯಿಲ್ಲವೆ?" ಎನ್ನುತ್ತಾ ಅವನು ಧೀರಮತಿಯನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಸಹನನುಮಾತ್ರ ಉಳಿದ ನಾವಿಕರ ಕ್ಷೇಮಸಮಾಚಾರ ನೋಡಿ ಕೊಳ್ಳಲಿಕ್ಕಾಗಿ ನೌಕೆಗೆ ಹಿಂದಿರುಗಿದನು.

ಮರುದಿನ ಬೆಳಗ್ಗೆ ಧೀರಮತಿ ನಿದ್ರೆ ಯಿಂದೆದ್ದು ಸುಖವಾಗಿ ಮಿಂದು ಬಟ್ಟೆಬದಲಾ ಯಿಸಿಕೊಂಡನು. ಅವನನ್ನು ಪ್ರತಾಪನ ಬಳಿಗೆ ಕರೆದುಕೊಂಡು ಹೋಗಲು ಒಂದು ಕುದುರೆ



ಬಂಡಿ ತಯಾರುಮಾಡಿದರು. ದಾರಿಗೆ ಬೇಕಾದ ಆಹಾರವನ್ನು ತೆಗೆದುಕೊಂಡು ನವ ದ್ಯೋತನ ಕುಮಾರನೊಬ್ಬ ಧೀರಮತಿ ಯೊಂದಿಗೆ ಬಂಡಿಯಲ್ಲಿ ಹೊರಟನು. ಅವ ರಿಬ್ಬರೂ ಆದಿನವೂ ಮರುದಿನವೂ ಪ್ರಯಾಣ ಮಾಡಿ ಪ್ರತಾಪನ ದೇಶವನ್ನು ಸೇರಿದರು.

ಸರಿಯಾಗಿ ಅದೇ ಸಮಯಕ್ಕೆ ಪ್ರತಾಪನು ತನ್ನ ಮಗಳನ್ನು ವಜ್ರಕಾಯನ ಮಗನಿಗೆ ಕೊಟ್ಟು ಮದುವೆ ಮಾಡುತ್ತಿದ್ದ. ಈ ಮದು ವೆಗೆ ನೆರೆಹೊರೆ ಪ್ರಾಂತಗಳಿಂದ ಅನೇಕಮಂದಿ ಬಂದಿದ್ದರು. ಒಂದು ವಿಶಾಲವಾದ ಚಾವಡಿ ಯಲ್ಲಿ ಔತಣ, ವಿನೋದ ಕೂಟಗಳು ನಡೆಯುತ್ತಿದ್ದುವು. ಆಗ ಪ್ರತಾಪನ ಅಂಗ ರಕ್ಷಕನಾದ ಭಟನೊಬ್ಬ ಅವನಬಳಿಗೆ

ಬಂದು—"ಮಹಾರಾಜ, ಯಾರೋ ಇಬ್ಬರು ಹೊಸ ಯುವಕರು ಬಂಡಿಯಲ್ಲಿ ಬಂದು ಇಳಿದಿದ್ದಾರೆ. ಅವರನ್ನು ಒಳಕ್ಕೆ ಕಳುಹಿಸಲೆ? ಅಥವಾ ಬೇರೆಲ್ಲಿಗಾದರೂ ಕಳುಹಿಸಲೆ?" ಎಂದು ಕೇಳಿದ.

ಪ್ರತಾಪನು ಹುಬ್ಬುಗಂಟಿಕ್ಕಿ—"ನೀನೆಷ್ಟು ಮೂರ್ಖ! ನಾವು ಪರದೇಶಗಳಲ್ಲಿ ದಿಕ್ಕಿಲ್ಲದ ಸ್ಥಿತಿಯಲ್ಲಿ ಎಷ್ಟುಸಾರಿ ಬೇರೆಯವರ ಆತಿಥ್ಯ ವನ್ನು ಪಡೆದಿಲ್ಲ? ಕೂಡಲೇಹೋಗಿ ಆ ಹೊಸ ಯುವಕರನ್ನು ಊಟಕ್ಕೆ ಕರೆ" ಎಂದ.

ಸ್ವಲ್ಪಹೊತ್ತಿಗೆ ಧೀರಮತಿಯೂ, ಅವನ ಅನುಚರನೂ ಔತಣನಡೆಯುವಲ್ಲಿಗೆ ಬಂದು ಆಶ್ಚರ್ಯದಿಂದ ಸುತ್ತೂ ನೋಡಿದರು. ಆ ಚಾವಡಿಯಲ್ಲಿ ಸೂರ್ಯಚಂದ್ರರೇ ಪ್ರಕಾಶಿಸುವ ಹಾಗಿದೆ. ನೌಕರರು ಬಂದು ಅವರನ್ನು ಕರೆದುಕೊಂಡುಹೋಗಿ ಸ್ನಾನಮಾಡಿಸಿ, ಬಟ್ಟೆ ಉಡಿಸಿ, ಪ್ರತಾಪನ ಬಳಿಯಲ್ಲಿಯೇ ಭೋಜನಕ್ಕೆ ಕುಳ್ಳಿರಿಸಿದರು.

ಪ್ರತಾಪನು ಅವರನ್ನು ಕುರಿತು—"ಹುಡುಗರೆ, ನಿಮ್ಮನ್ನು ನೋಡಿದರೆ ರಾಜಕುಮಾರರ ಹಾಗೆ ಕಾಣುತ್ತೀರಿ. ಸರಿ. ಮೊದಲು ಊಟ ಮಾಡಿರಿ. ನಂತರ ನೀವಾರು, ಏಕೆ ಬಂದಿರಿ ಎಂಬುದನ್ನೆಲ್ಲಾ ಹೇಳುವಿರಂತೆ" ಎಂದನು.

ಇಬ್ಬರೂ ಊಟಮಾಡಿದರು. ಧೀರಮತಿ ತನ್ನ ಅನುಚರನ ಕಿವಿಯಲ್ಲಿ ಗುಟ್ಟಾಗಿ—"ಅಬ್ಬಾ! ಇಲ್ಲಿ ಎಷ್ಟುಕಂಚು, ಎಷ್ಟುಬೆಳ್ಳಿ, ಎಷ್ಟು ಬಂಗಾರ, ಎಷ್ಟು ದಂತಗಳುಂಟು ನೋಡಿದೆಯಾ?" ಎಂದ.





ಈ ಮಾತು ಪ್ರತಾಪನ ಕಿವಿಗೆ ಬಿತ್ತು. "ಹುಡುಗರೇ, ನಾನು ಈ ಸಿರಿಸಂಪತ್ತ ನ್ನೆಲ್ಲಾ ನಾನಾದೇಶಗಳನ್ನು ತಿರುಗಿ ಸಂಪಾದನೆಮಾಡಿದೆ. ಆದರೆ ಟ್ರಾಯ್ ಕೋಟೆಯ ಗೋಡೆಯಮುಂದೆ ನನ್ನ ಅನುಚರರನೇಕರು ಪ್ರಾಣಬಿಟ್ಟರು. ಅವರು ಬದುಕಿರುತ್ತಿದ್ದರೆ ಈ ಸಂಪತ್ತಿಲ್ಲದಿದ್ದರೂ ನಾನು ಹೆಚ್ಚು ಸುಖವಾಗಿರುತ್ತಿದ್ದೆ. ಅವರಿಗಾಗಿ ನಾನು ಆಗಾಗ ಅಳುತ್ತೇನೆ. ಆದರೆ ಎಲ್ಲರಿಗಿಂತಲೂ ಹೆಚ್ಚಾಗಿ ನಾನು ಅಳುವುದು ರೂಪಧರನಿಗಾಗಿಯೆ. ಒಂದೊಂದು ರಾತ್ರಿ ಆತನ ಜ್ಞಾಪಕ ಬಂದರೆ ನನಗೆ ಬೆಳಗಾಗುವವರೆಗೂ ನಿದ್ರೆಯೇ ಬಾರದು. ನನ್ನ ಸಂಗತಿಯೇ ಹೀಗಿರುವಾಗ ಮುದುಕನಾದ ಅವನ ತಂದೆಯೂ, ಅವನ ಹೆಂಡತಿಯೂ, ಅವನ ಕುಮಾರನೂ ಎಷ್ಟು ಅಳುತ್ತಿದ್ದಾರೋ!" ಎಂದು ಪ್ರತಾಪನು ವ್ಯಸನದಿಂದ ಹೇಳಿದನು.

ಈ ಮಾತನ್ನು ಕೇಳುವಾಗ ಧೀರಮತಿಗೆ ದಃಖವು ತಡೆಯಲಿಲ್ಲ. ಅವನು ಮುಖ ತಿರುಗಿಸಿಕೊಂಡು ಕಣ್ಣೊರೆಸಿಕೊಳ್ಳುವ ಸಮಯಕ್ಕೆ ಭುವನಸುಂದರಿ ಅಲ್ಲಿಗೆ ಬಂದಳು.

ಧೀರಮತಿಯನ್ನು ನೋಡುತ್ತಲೇ ಅವಳು– "ಈ ಹುಡುಗ ಯಾರೋ! ಸಾಕ್ಷಾತ್ ರೂಪಧರನ ಪ್ರತಿರೂಪದಂತಿದ್ದಾನೆ!" ಎಂದಳು ಆಶ್ಚರ್ಯದಿಂದ.

"ನಿಜವೇ, ಹಾಗೇ ಇದ್ದಾನೆ" ಎಂದ ಪ್ರತಾಪ ಧೀರಮತಿಯನ್ನು ನೋಡುತ್ತಾ. ಆಗ ನವದ್ಯೋತನ ಕುಮಾರನು ಪ್ರತಾಪ





ನನ್ನು ಕುರಿತು :—" ನೀವು ಹೇಳುವುದು ನಿಜ. ಈತ ನಿಜಕ್ಕೂ ರೂಪಧರನ ಮಗನೇ. ರೂಪಧರನಿಲ್ಲದ ಕಾರಣ ಆತನ ಮನೆ ನಾಯಿಗಳ ಕೊಟ್ಟಿಗೆಯಂತಾಗಿದೆ. ಇವನು ಬಹಳ ಇರುಕಿನಲ್ಲಿ ಸಿಕ್ಕಿರುತ್ತಾನೆ. ನೀವಾದರೂ ಇವನಿಗೆ ತಕ್ಕ ಸಲಹೆ ಸಹಕಾರಗಳನ್ನು ಕೊಡುವಿರೇನೋ ಎಂದುಕೊಂಡು ನನ್ನ ತಂದೆ ನವದ್ಯೋತರು ನನ್ನೊಂದಿಗೆ ಇವನನ್ನು ನಿಮ್ಮ ಬಳಿಗೆ ಕಳುಹಿಸಿದ್ದಾರೆ " ಎಂದ.

" ರೂಪಧರನ ಮಗ ನನ್ನ ಮನೆಗೆ ಬರುವುದು ಎಂಥ ಚಿತ್ರ!" ಎಂದ ಪ್ರತಾಪ. ತರುವಾಯ ಅವರು ರೂಪಧರನನ್ನು ಕುರಿತು ಬಹಳಹೊತ್ತು ಮಾತಾಡಿಕೊಂಡರು. ರೂಪಧರನು ತನ್ನ ಮೈ ತುಂಬಾ ಏಟುಗಾಯಗಳನ್ನು ಹಾಕಿಸಿಕೊಂಡು ಗ್ರೀಕು ಶಿಬಿರದಿಂದ ಓಡಿಹೋದ ಬಾನಿಸ ರೂಪದಲ್ಲಿ ಟ್ರಾಯ್‌ನಗರವನ್ನು ಪ್ರವೇಶಿಸಿದಾಗ, ತಾನು ಅವನ ಗುರುತು ಹಿಡಿದುದನ್ನು ಕುರಿತು ಭುವನಸುಂದರಿ ನೆನೆಸಿ ನೆನಿಸಿ ಹೇಳಿದಳು. ತಾವೆಲ್ಲಾ ಬ್ರಹ್ಮಾಂಡವಾದ ಮರದ ಕುದುರೆಯೊಳಗೆ ಕುಳಿತಿದ್ದಾಗ, ಭುವನಸುಂದರಿ ಬಂದು ಒಳಗಿರುವವರನ್ನು ಹೆಸರುಹೇಳಿ ಕರೆದಾಗ ಅವರಲ್ಲಿ ಕೆಲವರು ಅವಸರದಿಂದ ಹೊರಕ್ಕೆ ಧುಮುಕಲೆಳಸಿದಾಗ ರೂಪಧರನು ಅವರನ್ನು ನಿವಾರಿಸಿದ ವೃತ್ತಾಂತವನ್ನು ಪ್ರತಾಪನು ಗದ್ಗದವಾಗಿ ಹೇಳಿದನು.

ಆಗ ಧೀರಮತಿ—" ಮಹಾರಾಜರೆ, ನನ್ನ ತಂದೆಯ ಸಂಗತಿ ನಿಮಗೇನಾದರೂ ಗೊತ್ತಿದ್ದರೆ ತಿಳಿಯೋಣ ವೆಂದೇ ನಾನು ಬಂದೆ. ಆ ವಿಷಯದಲ್ಲಿ ನಿಮಗೆ ತಿಳಿದಿರುವುದನ್ನು ಮರೆಮಾಜದೆ ಹೇಳಿ " ಎಂದನು.

"ನನಗೆ ತಿಳಿದುದನ್ನು ಹೇಳುವೆನು ಕೇಳು. ನಾನು ಈಜಿಪ್ಟು ದೇಶದಲ್ಲಿ ಸಿಕ್ಕಿಕೊಂಡ ಸಮಯದಲ್ಲಿ, ನನಗೆ ಸಮುದ್ರಗಳಲ್ಲಿ ವಾಸ ಮಾಡುವ ವೃದ್ಧನೊಬ್ಬ ಕಾಣಿಸಿದ. ಆತ ನನಗೆ ಅನೇಕಮಂದಿಯ ವಿಷಯ ಹೇಳುತ್ತಾ, ರೂಪಧರನು ತನ್ನ ಅನುಚರರನ್ನೆಲ್ಲಾ ಕಳೆದುಕೊಂಡು ಯಾವುದೋ ದ್ವೀಪದಲ್ಲಿ ಬಂದಿಯಾಗಿ ಸಮ್ಮೋಹಿನಿಯ ಕೈಗೆ ಸಿಕ್ಕಿರುತ್ತಾನೆಂದು ಹೇಳಿದ " ಎಂದ. —(ಇನ್ನೂ ಇದೆ)






**ಡೆ**ಲ್ಲಿಯನ್ನು ಆಳಿದ ಬಾದಷಹರಲ್ಲಿ ಅಲ್ಲಾವುದೀನ್ ಖಿಲ್ಜಿ ಒಬ್ಬನು. ಅವನು ತುಂಬಾ ದುಷ್ಟ. ಅವನಲ್ಲಿ ಎರಡು ವಿಚಿತ್ರ ಗುಣಗಳಿದ್ದುವು. ಪ್ರಪಂಚವನ್ನೆಲ್ಲಾ ಜಯಿಸಬೇಕೆಂಬ ಕೋರಿಕೆಯೊಂದು; ಅಪೂರ್ವಸುಂದರಿಯರನ್ನೆಲ್ಲ ತನ್ನ ಮಡದಿಯರನ್ನಾಗಿ ಮಾಡಿಕೊಳ್ಳುವ ಅಪೇಕ್ಷೆ ಮತ್ತೊಂದು.

ಅಲ್ಲಾವುದೀನ್ ರಾಜಪುತ್ರರ ರಾಜ್ಯಗಳನ್ನು ವಶಪಡಿಸಿಕೊಳ್ಳಲು ಹವಣಿಸುತ್ತಿರಲು ಅವನಿಗೆ ಪದ್ಮಿನಿ ಅಪೂರ್ವ ಸುಂದರಿಯೆಂಬ ವಿಷಯ ತಿಳಿಯಿತು.

ಮೇವಾರು ರಾಜ್ಯಕ್ಕೆ ಚಿತ್ತೂರು ರಾಜಧಾನಿ. ಮೇವಾರದ ರಾಜನಾದ ಲಕ್ಸ್ಮಿ ಇನ್ನೂ ಬಾಲಕ. ಆದುದರಿಂದ ಆ ಹುಡುಗನ ಹೆಸರಿನಲ್ಲಿ ಅವನ ಚಿಕ್ಕಪ್ಪನಾದ ಭೀಮಸಿಂಗನು ರಾಜ್ಯಭಾರದಹೊಣೆ ಹೊತ್ತಿದ್ದನು. ಭೀಮಸಿಂಗನ ಪತ್ನಿ ಪದ್ಮಿನಿ. ಆಕೆಯ ಜನ್ಮಸ್ಥಳ ಸಿಂಹಳದ್ವೀಪ. ಅಂದಚೆಂದಗಳಲ್ಲಿ ಪದ್ಮಿನಿಯ ಸರಿಸಮಾನರಾದ ಸ್ತ್ರೀ ಆ ಕಾಲದಲ್ಲಿ ಮತ್ತೊಬ್ಬಳಿರಲಿಲ್ಲ. ತಾನು ಎರಡನೇ ಅಲೆಗ್ಜಾಂಡರನೆಂದು ಪ್ರತಾಪಕೊಚ್ಚಿಕೊಳ್ಳುತ್ತಿದ್ದ ಅಲ್ಲಾವುದೀನ್ ಪದ್ಮಿನಿಯನ್ನು ತನ್ನ ಪರಾಕ್ರಮದಿಂದ ಗೆಲ್ಲಲು ನಿಶ್ಚಯಿಸಿ, ತನ್ನ ಸೈನ್ಯವನ್ನು ಚಿತ್ತೂರು ದುರ್ಗದಕಡೆ ನಡೆಯಿಸಿದನು. ಆ ದುರ್ಗ ಬೆಟ್ಟದಮೇಲಿತ್ತು. ಅದನ್ನು ಗೆಲ್ಲುವುದು ಅತಿಕಷ್ಟತರ. ಅಲ್ಲಾವುದೀನನ ಸೇನೆ ಬೆಟ್ಟವನ್ನು ಸತ್ತುಗಟ್ಟಿತಾದರೂ ಅವರಿಂದ ದುರ್ಗವನ್ನು ವಶಪಡಿಸಿಕೊಳ್ಳಲು ಸಾಧ್ಯವಾಗಲಿಲ್ಲ.

ರಜಪುತರು ತುಂಬಾ ಅಭಿಮಾನಧನರು. ಅವರು ತಮ್ಮ ಆತ್ಮಗೌರವವನ್ನು ಕಾಪಾಡಿಕೊಳ್ಳಲು ಪ್ರಾಣವನ್ನೂಸಹ ತ್ಯಾಗಮಾಡುವರು. ಚಿತ್ತೂರು ದುರ್ಗವನ್ನು ಅವರು ಅತ್ಯಂತ ಧೈರ್ಯಸಾಹಸಗಳಿಂದ ಕಾಪಾಡಿದರು. ರಾತ್ರಿಹಗಲೆನ್ನದೆ ಅಲ್ಲಾವುದೀನನು ತನ್ನ ಸೈನ್ಯವನ್ನು ಚಿತ್ತೂರು ದುರ್ಗದ ಮೇಲಕ್ಕೆ ಕಳುಹಿಸಿದನು. ಹಾಗೆ ಹೋದ ಸೈನಿಕರು ನಾಶವೇ ಆದರು.

ಡಿ. ಗಣಪತಿಭಟ್ಟ



ಈ ಅನಿರೀಕ್ಷಿತ ಪ್ರತಿಭಟನೆ ಅಲ್ಲಾವುದೀನನಿಗೆ ನಿರುತ್ಸಾಹವನ್ನುಂಟುಮಾಡಿತು. ನಿಜವಾಗಿ ಪದ್ಮಿನಿ ಅತ್ಯಂತ ರೂಪಸಿಯೋ ಅಲ್ಲವೋ ಎಂಬ ವಿಷಯವನ್ನು ತಿಳಿಯದೆಯೇ ಅವನು ತನ್ನ ಸೈನ್ಯವನ್ನು ಆಕೆಗಾಗಿ ಆಹುತಿಕೊಡುತ್ತಿದ್ದನು. ಅನೇಕಜನ ಸುಂದರಿಯರಾದ ಮಡದಿಯರು ಅವನಿಗಿರುವಾಗ ಈ ರೀತಿ ಕಷ್ಟಪಡಲು ಆತನಿಗೇನು ಗ್ರಹಚಾರವೋ!

ಕಡೆಗೆ ಅಲ್ಲಾವುದೀನನು ಚಿತ್ತೂರಿನ ಮುತ್ತಿಗೆಯನ್ನು ಸಾಕುಮಾಡಿ ಡೆಲ್ಲಿಗೆ ಹಿಂತಿರುಗುವ ಯೋಚನೆಯಲ್ಲಿದ್ದನು. ಆಗಲೇ ಭೀಮಸಿಂಗನು ಸಂಧಿಗಾಗಿ ರಾಯಭಾರಿಯನ್ನು ಅವನಲ್ಲಿಗೆ ಕಳುಹಿಸಿಕೊಟ್ಟನು. ಯುದ್ಧವನ್ನು ನಿಲ್ಲಿಸಿದರೆ ಬಾದಷಹನಿಗೆ ಯಥೇಚ್ಛವಾಗಿ ಹಣ ಕೊಡುವುದಾಗಿ ಹೇಳಿ ಕಳುಹಿಸಿದ್ದ ರಾಜಾ ಭೀಮಸಿಂಗ್.

ಸಂಧಿಯ ಮಾತು ಕೇಳುತ್ತಲೇ ಅಲ್ಲಾವುದೀನನು ಪದ್ಮಿನಿಯನ್ನು ವಶಪಡಿಸಿಕೊಳ್ಳದೆ ದೆಹಲಿಗೆ ಹೋಗಕೂಡದೆಂದು ನಿರ್ಧರಿಸಿದನು. ಆದರೆ ಅವನು ರಾಯಭಾರಿಯೊಂದಿಗೆ ಆ ವಿಷಯ ತಿಳಿಸಲಿಲ್ಲ. "ಪ್ರಂಚದಲ್ಲಿ ಪದ್ಮಿನಿಯನ್ನು ಮಿಾರಿಸಿದ ಸುಂದರಿಯರು ಇಲ್ಲವೆಂದು ಹೇಳುತ್ತಾರೆ. ಆಕೆಯನ್ನು ಒಮ್ಮೆ ನೋಡಲು ಅವಕಾಶಕೊಟ್ಟರೆ ನಾನು ಸಂಧಿಗೆ ಒಡಂಬಡುವೆನೆಂದು ರಾಜಾ ಭೀಮಸಿಂಗನಿಗೆ ಹೇಳು" ಎಂದು ರಾಯಭಾರಿಯೊಂದಿಗೆ ಹೇಳಿದನು. ರಾಯಭಾರಿ ಹೇಳಿದ ಮಾತು ಕೇಳಿ ಚಿತ್ತೂರಿನ ರಜಪೂತರ ರಕ್ತ ಕುದಿಯಿತು.



ಆದರೆ ಪ್ರಜೆಗಳ ಸುಖವನ್ನು ಕೋರಿ ಅವರು ಅಲ್ಲಾವುದೀನನ ಕೋರಿಕೆಯನ್ನು ನೆರವೇರಿಸಲು ನಿಶ್ಚಯಿಸಿದರು. "ನಾಳೆ ನೀನೊಬ್ಬನೇ ನಿರಾಯುಧನಾಗಿ ಚಿತ್ತೂರು ದುರ್ಗಕ್ಕೆ ಬಂದರೆ ನಿನ್ನ ಕೋರಿಕೆ ನೆರವೇರುವುದು" ಎಂದು ಅವರು ಅಲ್ಲಾವುದೀನನಿಗೆ ಸುದ್ದಿಯನ್ನು ಕಳುಹಿಸಿದರು.

ರಜಪೂತರು ಆಡಿದಮಾತಿನಂತೆ ನಡೆದುಕೊಳ್ಳುವರೆಂದು ಅಲ್ಲಾವುದೀನನು ಅರಿತಿದ್ದನು. ಎಂತಲೇ ಅವನೊಬ್ಬನೇ ನಿರಾಯುಧನಾಗಿ ದುರ್ಗಕ್ಕೆ ಹೊರಟನು.

ಆದರೆ ಮೋಸದಿಂದ ಪದ್ಮಿನಿಯನ್ನು ಅಪಹರಿಸಲು ಅವನು ಒಂದು ಉಪಾಯ ಯೋಚಿಸಿದ್ದನು. ಕಾವಲುಗಾರರು ಬಾದಷಹನನ್ನು ಸಗೌರದಿಂದ ದುರ್ಗಕ್ಕೆ ಬರಮಾಡಿಕೊಂಡರು. ಭೀಮಸಿಂಗನು ಬಾದಷಹನಿಗೆ ಸುಸ್ವಾಗತ ನೀಡಿದನು. ಅಲ್ಲಾವುದೀನನು ಸೊಗುಸಾಗಿ ಅಲಂಕರಿಸಲ್ಪಟ್ಟಿದ್ದ ದರ್ಬಾರ್ ಭವನವನ್ನು ಪ್ರವೇಶಿಸಿ ಅಲ್ಲಿ ಪದ್ಮಿನಿಯನ್ನು ಕಂಡನು.

ಆದರೆ ಒಂದು ಕನ್ನಡಿಯಲ್ಲಿ ಅವನಿಗೆ ಪದ್ಮಿನಿಯ ಪ್ರತಿಬಿಂಬ ಕಾಣಿಸಿತು. ಒಂದು ಕನ್ನಡಿಯೊಳಗೆ ಸಾಲಾಗಿ ಹನ್ನೆರಡು ಕನ್ನಡಿಗಳಲ್ಲಿ ಹನ್ನೆರಡುಬಾರಿ ಪ್ರತಿಬಿಂಬಿಸಿದ ಪದ್ಮಿನಿಯ ರೂಪವನ್ನು ಬಾದಷಹನು ನೋಡಿದನು. ಪದ್ಮಿನಿ ತ್ರಿಲೋಕಸುಂದರಿ ಎಂದು ಅಲ್ಲಾವುದೀನನು ಮನಗಂಡನು. ಅವನು ಪದ್ಮಿನಿಯ ರೂಪವನ್ನು ರೆಪ್ಪೆಯಲುಗಿಸದೆ ಕನ್ನಡಿಯಲ್ಲಿ ನೋಡುತ್ತಿದ್ದರೆ ಅಲ್ಲಿದ್ದ ರಜ



ಪೂತರು ಕೋಪದಿಂದ ಕುದಿಯುತ್ತಿದ್ದರು. ಆದರೆ ಅವರು ತಮ್ಮ ಕೋಪವನ್ನು ಹೊರಗೆ ತೋರ್ಪಡಿಸಿಕೊಳ್ಳಲಿಲ್ಲ.

ಅಲ್ಲಾವುದೀನನು ಹೊರಡಲು ಎದ್ದು ನಿಂತನು. ಭೀಮಸಿಂಗನು ಅವನನ್ನು ಕಳುಹಿಸಿಕೊಡಲು ಸಂಗಡ ಹೊರಟನು. ಅವಮಾನದಿಂದ ಅಳುತ್ತಿದ್ದ ಪದ್ಮಿನಿಯನ್ನು ಅಂತಃಪುರದ ಸ್ತ್ರೀಯರು ಸಮಾಧಾನ ಪಡಿಸುತ್ತಿದ್ದರು.

ಅಲ್ಲಾವುದೀನನು ಬೆಟ್ಟದಿಂದ ಇಳಿಯುತ್ತಿರುವಾಗ ಭೀಮಸಿಂಗನೊಂದಿಗೆ ಪದ್ಮಿನಿಯ ಸೌಂದರ್ಯವನ್ನು ವಿವಿಧವಾಗಿ ಬಣ್ಣಿಸುತ್ತಿದ್ದನು. ಧರ್ಮಕ್ಕೆ ಕಟ್ಟುಬೀಳದಿದ್ದರೆ ಭೀಮಸಿಂಗನು ಆ ನೀಚನನ್ನು ಸುಲಭವಾಗಿ ಕತ್ತು ಹಿಸುಕಿ ಕೊಲ್ಲಬಹುದಾಗಿತ್ತು.

ಈರ್ವರೂ ಯವನರ ಶಿಬಿರವನ್ನು ಸಮೀಪಿಸಿದರು. ಬಾದಷಹನಿಗೆ ಪದ್ಮಿನಿಯನ್ನು ತನ್ನ ಪತ್ನಿಯನ್ನಾಗಿ ಮಾಡಿಕೊಳ್ಳುವ ಅಭಿಲಾಷೆ ಮತ್ತಷ್ಟು ಹೆಚ್ಚಾಯಿತು. ಅವನು ತನ್ನ ಭಟರಿಗೆ ಕಣ್ಣು ಸನ್ನೆಮಾಡಿದನು. ಮರುಕ್ಷಣವೇ ಅವರು ಭೀಮಸಿಂಗನಮೇಲೆ ಬಿದ್ದು, ಆತನನ್ನು ಬಂಧಿಸಿ ಗುಡಾರದಲ್ಲಿ ಕೂಡಿದರು.

ಈ ಅತ್ಯಾಚಾರದ ಸುದ್ದಿ ಕೇಳಿ ರಜಪೂತರು ದಂಗಾದರು. ತಮ್ಮ ರಾಜನನ್ನು ಸೆರೆಯಿಂದ ಬಿಡುಗಡೆ ಮಾಡಬೇಕೆಂದು ಅವರು ಅಲ್ಲಾವುದೀನನಿಗೆ ಸುದ್ದಿ ಕಳುಹಿಸಿದರು. ಪದ್ಮಿನಿಯನ್ನು ತನ್ನ ವಶಮಾಡಿದರೆ ಭೀಮಸಿಂಗನನ್ನು ಬಿಡುಗಡೆ ಮಾಡುವುದಾಗಿ ಅಲ್ಲಾವುದೀನನು ಜವಾಬು ಕಳುಹಿಸಿದನು.



ಒಂದುವಾರ ರಜಪೂತರು ಯೋಚಿಸಿದರು. ಲಕುಮ್ಮ ಇನ್ನೂ ಬಾಲಕ. ಭೀಮಸಿಂಗನು ಸೆರೆಯಾಳಾದನಂತರ ಚಿತ್ತೂರಿನ ಪ್ರಜೆಗಳಿಗೆ ನಾಯಕನಿರಲಿಲ್ಲ. ಈಗ ಎಲ್ಲ ಆಗುಹೋಗು ಗಳಿಗೂ ಬಾಧ್ಯಳು ಪದ್ಮಿನಿ. ಆಕೆಯೊಂದು ಸಭೆಸೇರಿಸಿ, ಪರಿಸ್ಥಿತಿಯನ್ನು ವಿವರಿಸಿ, ತನ್ನ ನೆಂಟನಾದ ಗೋರಾಸಿಂಗನನ್ನು ದಂಡ ನಾಯಕನನ್ನಾಗಿ ನೇಮಿಸಿ, ಭೀಮಸಿಂಗನನ್ನು ಕಾಪಡಲು ಒಂದು ಉಪಾಯವನ್ನು ಸೂಚಿಸಿ ದಳು. ಆಕೆ ಹೇಳಿದ ಉಪಾಯವನ್ನು ಆಚರ ಣೆಗೆ ತರಲು ಅಲ್ಲಿ ನೆರದಿದ್ದವರೆಲ್ಲ ಒಪ್ಪಿಕೊಂ ಡರು. ಚಿತ್ತೂರಿನಿಂದ ಗೋರಾಸಿಂಗನು ದೂತ ನಾಗಿ ಬಾದಷಹನಬಳಿಗೆ ಬಂದು "ಸಾರ್ವ ಭೌಮರೇ, ನೀವು ನಮ್ಮ ರಾಜನನ್ನು ಬಿಡುಗಡೆ ಮಾಡಿದ ಪಕ್ಷಕ್ಕೆ ಪದ್ಮಿನಿ ನಿಮ್ಮ ಬಳಿಗೆ ಬರು ತ್ತಾಳೆ. ಆದರೆ ಆಕೆಯೊಂದಿಗೆ ಕೆಲವಾರು ದಾಸಿಯರು ಬರಲು ತಾವು ಅನುಮತಿ ಕೊಡ ಬೇಕು" ಎಂದನು.

ಬಾದಷಹನ ಆನಂದಕ್ಕೆ ಮೇರೆ ಇಲ್ಲ. "ಪದ್ಮಿನಿ ತನ್ನ ಘನತೆಗೆ ತಕ್ಕಂತೆ ಬರ ಬಹುದು. ನಮ್ಮ ಆಕ್ಷೇಪಣೆ ಏನೂ ಇಲ್ಲ. ಆದರೆ ಕೂಡಲೇ ಆಕೆ ಹೊರಟು ಬರಲಿ" ಎಂದ ಅಲ್ಲಾವುದೀನ್. "ರಾಣಿಯಸಂಗಡ ರಕ್ಷಕಭಟರು ಕೆಲವರು ಬರಬಹುದಷ್ಟೇ?" ಗೋರಾಸಿಂಗನು ಕೇಳಿದನು.

"ಬೇಡ, ಬೇಡ. ಇದು ಮದುವೆ. ಯುದ್ಧ ಭೂಮಿಯಲ್ಲ" ಎಂದು ಅಲ್ಲಾವುದೀನನು ನಗೆಯಾಡಿದ. ಬಾದಷಹನು ತನ್ನ ಭಟರನ್ನು



ಕೂಗಿಕರೆದು "ಇಂದು ನಮಗೆಲ್ಲಾ ಹಬ್ಬ. ಶಿಬಿರದಲ್ಲಿ ವಿನೋದವಿಲಾಸಗಳು ನಡೆಯಲಿ" ಎಂದು ಆಜ್ಞಾಪಿಸಿದನು. ಶಿಬಿರವೆಲ್ಲಾ ಆನಂದೋತ್ಸಾಹದಲ್ಲಿ ಮುಳುಗಿ ತೇಲುತ್ತಿರುವ ಸಮಯದಲ್ಲಿ ಏಳುನೂರು ಪಲ್ಲಕ್ಕಿಗಳು ಬೆಟ್ಟದಿಂದ ಇಳಿದುಬಂದವು. ಒಂದೊಂದು ಪಲ್ಲಕ್ಕಿಯನ್ನೂ ಆರಾರುಜನ ಬೋಯಿಗಳು ಹೊತ್ತಿದ್ದರು. ಯವನಸೈನಿಕರು ಯಾರೂ ಆ ಪಲ್ಲಕ್ಕಿಗಳ ಗೋಜಿಗೆ ಹೋಗಲಿಲ್ಲ.

ಪಲ್ಲಕ್ಕಿಗಳನ್ನೆಲ್ಲಾ ಅಲ್ಲಾವುದೀನನ ಗುಡಾರದಬಳಿ ಇಳಿಸಲಾಯಿತು. ಗೋರಾಸಿಂಗನು ಒಳಗೆ ಪ್ರವೇಶಿಸಿ ಬಾದಷಹನೊಂದಿಗೆ "ಪದ್ಮಿನಿ ಬಂದಳು. ಮಹಾಪ್ರಭುಗಳು ಭೀಮಸಿಂಗನನ್ನು ಬಿಡುಗಡೆಮಾಡಬೇಕು" ಎಂದನು.

"ಮುಂಚೆ ನಾನು ಪದ್ಮಿನಿಯನ್ನು ವಿವಾಹವಾಗಬೇಕು" ಎಂದ ಅಲ್ಲಾವುದೀನ್.

"ಹಾಗಾದರೆ ಪದ್ಮಿನಿ ತನ್ನ ಪತಿಯಿಂದ ಬೀಳ್ಕೊಡಿಕೆ ಪಡೆಯಲು ಅನುಮತಿಕೊಡಿ" ಎಂದ ಗೋರಾಸಿಂಗ್. ಬಾದಷಹನು ಈ ವ್ಯವಸ್ಥೆಗೆ ಒಪ್ಪಿಕೊಳ್ಳಬೇಕಾಯಿತು.

ಪದ್ಮಿನಿಯನ್ನು ಕಂಡು ಭೀಮಸಿಂಗನು ಬೆರಗಾದನು. "ಗಟ್ಟಿಯಾಗಿ ಮಾತನಾಡಬೇಡಿ. ಇದೋ ಖಡ್ಗ. ಹೊರಗಡೆ ಎರಡು ಕುದುರೆಗಳಿವೆ. ನಡಿಯಿರಿ" ಎಂದಳು ಪದ್ಮಿನಿ.

ಪಹರೆಯವರು ನಡೆದ ಮೋಸವನ್ನು ತಿಳಿಯುವ ಮೊದಲೇ ಭೀಮಸಿಂಗ್ ಮತ್ತು ಪದ್ಮಿನಿಯರು ಗುಡಾರದಿಂದ ಹೊರಬಿದ್ದು ಚಿತ್ತೂರಿನಕಡೆ ತನ್ನ ಕುದುರೆಗಳನ್ನು ವೇಗವಾಗಿ ಓಡಿಸಿದರು.

ಅದೇ ಸಮಯದಲ್ಲಿ ಪಲ್ಲಕ್ಕಿಗಳಿಂದ ಆಯುಧಪಾಣಿಗಳಾದಯೋಧರು ಹೊರಬಿದ್ದು ಯವನಸೈನಿಕರಮೇಲೆ ಬಿದ್ದರು. ಆ ಪಲ್ಲಕ್ಕಿಗಳನ್ನು ಹೊತ್ತುತಂದವರು ಸಹ ಸೈನಿಕರೇ ಆಗಿದ್ದರು. ಸುಮಾರು ಐದು ಸಾವಿರ ರಾಜಪುತ್ರರಿಗೂ, ಯವನರಿಗೂ ಘೋರಕಾಳಗ ನಡೆಯಿತು. ಈ ಯುದ್ಧದಲ್ಲಿ ರಾಜಪೂತರು ಅನೇಕರು ಮಡಿದರು. ಆದರೆ ಅಲ್ಲಾವುದೀನನ ಸೈನ್ಯವುಸಹ ನಾಶವಾಯಿತು. ಅಲ್ಲಾವುದೀನನು ರೋಷದಿಂದ, ನಿರಾಶೆಯಿಂದ ದೆಹಲಿಗೆ ಹಿಂತಿರುಗಿದನು.





# ತಾರುಮಾರಾದ ತೀರ್ಪು

ಸಿಂಹಳದೇಶದಲ್ಲಿ ಒಬ್ಬ ವರ್ತಕನಿದ್ದನು. ಅವನು ಸಮುದ್ರವ್ಯಾಪಾರಮಾಡಿ ಲಕ್ಷಗಟ್ಟಳೆ ಹಣ ಸಂಪಾದಿಸಿದನು. ಅವನು ಸಾಯುವ ಮುಂಚೆ ಮಗ ಜಯಪಾಲನನ್ನು ಕರೆದು, "ಮಗೂ, ನೀನೂ ಕಡಲವ್ಯಾಪಾರ ಮಾಡುವಾಗ ಅಪ್ಪಿತಪ್ಪಿಯಾದರೂ ವಂಚಕ ಮಹಾ ಪಟ್ಟಣಕ್ಕೆ ಹೋಗಬೇಡ, ಹುಷಾರ್" ಎಂದು ಎಚ್ಚರಿಕೆ ಕೊಟ್ಟನು.

ತಂದೆ ತೀರಿಹೋದನಂತರ ಜಯಪಾಲನು ತನ್ನ ನಾಲ್ಕು ನೌಕೆಗಳನ್ನು ದೇಶದೇಶಗಳಿಗೆ ಕಳುಹಿಸಿ ವ್ಯಾಪಾರ ಮಾಡಲಾರಂಭಿಸಿದನು. ಹೇಗಾದರೊಮ್ಮೆ ವಂಚಕ ಮಹಾಪಟ್ಟಣಕ್ಕೆ ಹೋಗಿ ಅಲ್ಲಿನ ವಿಶೇಷಗಳನ್ನು ತಿಳಿಯುವ ಕುತೂಹಲ ಅವನಲ್ಲಿ ಬಲವಾಗಿತ್ತು. ಅವನು ತುಂಬಾ ಬುದ್ಧಿವಂತ. ಯಾರಾದರೂ ತನಗೆ ಮೋಸಮಾಡಲು ಪ್ರಯತ್ನಿಸಿದರೆ ಅದಕ್ಕೆ ಪ್ರತಿವಂಚನೆ ಮಾಡಬಲ್ಲೆನೆಂಬ ದೃಢವಾದ ಆತ್ಮವಿಶ್ವಾಸ ಅವನಲ್ಲಿತ್ತು.

ಅವನು ಒಂದು ದಿನ ಆ ಪಟ್ಟಣಕ್ಕೆ ಪ್ರಯಾಣಮಾಡಿದನು. ನೌಕೆಗಳನ್ನು ರೇವಿನಲ್ಲಿ ಲಂಗರು ಹಾಕಿದನಂತರ ಜಯಪಾಲನು ತನ್ನ ಬಿಲ್ಲುಬಾಣಗಳನ್ನು ತೆಗೆದುಕೊಂಡು ತೀರ ಪ್ರದೇಶದಲ್ಲಿ ಬೇಟೆಗೆ ಹೊರಟನು. ಒಂದು ಸ್ಥಳದಲ್ಲಿ ಅವನಿಗೆ ಕೊಕ್ಕರೆಯೊಂದು ಕಾಣಿಸಿತು. ಆ ಕೊಕ್ಕರೆ ಮೀನುಗಳನ್ನು ಬೇಟೆಯಾಡುತಿತ್ತು. ಜಯಪಾಲನು ಆ ಕೊಕ್ಕರೆಗೆ ಬಾಣವನ್ನು ಬಿಟ್ಟನು. ಅದು ಸತ್ತುಬಿತ್ತು.

ಬಳಿಯಲ್ಲೇ ಮೀನು ಹಿಡಿಯುತ್ತಿದ್ದ ಬೆಸ್ತನೊಬ್ಬನು ಜಯಪಾಲನ ಬಳಿಗೆ ಧಾವಿಸಿ ಬಂದನು. "ಯಾರಯ್ಯಾ ನೀನು? ನನ್ನ ತಂದೆಯನ್ನು ಕೊಲ್ಲಲು ಕಾರಣವೇನು? ರಾಜನಿಗೆ ನಿನ್ನಮೇಲೆ ದೂರುಕೊಡುತ್ತೇನೆ" ಎಂದನು.

"ಎಲಾ, ಏನಿದು ಆಶ್ಚರ್ಯ. ಆ ಕೊಕ್ಕರೆ ನಿನ್ನ ತಂದೆ ಹೇಗೆ ಆದಾನು?" ಎಂದ ಜಯಪಾಲ ನಿಬ್ಬೆರಗಾಗಿ. "ಹೌದು. ಈ ಕೊಕ್ಕರೆ ಹಿಂದಿನ ಜನ್ಮದಲ್ಲಿ ನನ್ನ

ಎಫ್. ಗಫೂರ್

ತಂದೆ. ಈಗ ಕೊಕ್ಕರೆಯ ಜನ್ಮತಾಳಿ ನನಗೆ ಮೀನು ಹಿಡಿಯುವುದರಲ್ಲಿ ಸಹಾಯಮಾಡುತ್ತಿದ್ದಾನೆ" ಎಂದ ಆ ಬೆಸ್ತ.

ಜಯಪಾಲನಿಗೆ ಕೋಪಬಂತು. "ಹೋಗು, ನಿನ್ನಿಷ್ಟ ಬಂದವರೊಂದಿಗೆ ಹೇಳಿಕೊ ಹೋಗು" ಎಂದು ಅವನನ್ನು ಗದರಿಸಿದನು.

ಅನಂತರ ಜಯಪಾಲನು ನಗರವನ್ನು ಪ್ರವೇಶಿಸಿ ರಾಜಬೀದಿಯಲ್ಲಿ ನಡೆಯುತ್ತಿರಲು ಒಬ್ಬಾನೊಬ್ಬ ವ್ಯಕ್ತಿ ಎದುರಾಗಿ "ಎಷ್ಟು ದಿನಗಳನಂತರ ಕಾಣಿಸಿದೆ ತಮ್ಮಾ. ನಾನು ಹಲವಾರು ವರ್ಷಗಳ ಕೆಳಗೆ ನನ್ನ ಬಲಗಿವಿಯನ್ನು ನಿಮ್ಮ ತಂದೆಯಬಳಿ ಅಡವಿಟ್ಟು ಹತ್ತು ರೂಪಾಯಿ ಪಡೆದಿದ್ದೆ. ಈಗ ಆ ಹಣವನ್ನು ಬಡ್ಡೀಸಹಿತ ಕೊಡುವೆನು. ನನ್ನ ಕಿವಿ ನನಗೆ ಕೊಡಿಸಿಬಿಡಪ್ಪಾ" ಎಂದ. ಜಯಪಾಲನು ವಿಸ್ಮಯಹೊಂದಿ ನೋಡಿದನು. ಆವನಿಗೆ ಎಡಗಿವಿಮಾತ್ರವಿತ್ತು. ಬಲಗಿವಿ ಇರಲಿಲ್ಲ. "ನಮ್ಮ ತಂದೆ ನಿನ್ನ ಕಿವಿಯನ್ನು ಕುರಿತು ಪ್ರಸ್ತಾಪಿಸಲೇ ಇಲ್ಲವಲ್ಲಾ" ಎಂದ ಜಯಪಾಲ. "ಹಾಂ, ಹಾಗೆಂದರೇನು! ನನ್ನ ಕಿವಿ ನನಗೆ ಕೊಡಿಸಿಕೊಡದಿದ್ದರೆ ನಿನ್ನಮೇಲೆ ದೂರುಕೊಡುತ್ತೇನೆ" ಎಂದು ಹೆದರಿಸಿ ಹೊರಟುಬಿಟ್ಟ ಆ ವ್ಯಕ್ತಿ.

ಜಯಪಾಲನು ಮತ್ತಷ್ಟುದೂರ ಹೋಗಲು ಸ್ತ್ರೀಯೊಬ್ಬಳು ಕಾಣಿಸಿದಳು. "ಮಗೂ, ನಿಮ್ಮ ತಂದೆ ಹದಿನಾರು ವರ್ಷಗಳಹಿಂದೆ ಇಲ್ಲಿಗೆ ಬಂದು ನನ್ನನ್ನು ವಿವಾಹವಾದರು. ನನ್ನ ಜೀವನಾಂಶಕ್ಕಾಗಿ ಹತ್ತು ಸಾವಿರ



ರೂಪಾಯಿ ಕೊಡುವುದಾಗಿ ಮಾತುಕೊಟ್ಟಿದ್ದರು. ಆ ಹಣ ನೀನು ಕೊಡುವೆಯಾ ಇಲ್ಲ ದೊರೆಗೆ ದೂರುಕೊಡಲೊ?" ಎಂದಳು.

ಜಯಪಾಲನಿಗೆ ಆಕೆಯ ಧೋರಣೆ ಹಿಡಿಸಲಿಲ್ಲ. ಅವನು "ತೊಲಗು ಇಲ್ಲಿಂದ. ನಾನು ನಿನಗೆ ಒಂದು ಕಿಲುಬುಕಾಸನ್ನೂ ಕೊಡುವುದಿಲ್ಲ" ಎಂದು ಹೇಳಿ, ತನ್ನ ನೌಕೆಗಳಿದ್ದ ಸ್ಥಳಕ್ಕೆ ಹಿಂತಿರುಗಿದನು. ಅಲ್ಲಿ ಒಬ್ಬ ನಾಯಿಂದನು "ಕ್ಷೌರಮಾಡಲೇ ಸ್ವಾಮಿ" ಎಂದು ಕೇಳಿದನು. "ಏನು ಕೊಡಬೇಕು" ಎಂದು ಕೇಳಿದ ಜಯಪಾಲ.

"ನನ್ನನ್ನು ಸಂತೋಷಪಡಿಸಿ ಸ್ವಾಮಿ" ಎಂದ ನಾಯಿಂದ ಹಲ್ಲುಕಿರಿಯುತ್ತಾ. ಜಯಪಾಲನು ಅವನಿಂದ ಕ್ಷೌರಮಾಡಿಸಿಕೊಂಡು, ಅವನಿಗೆ ಒಂದು ರೂಪಾಯಿ ಕೊಟ್ಟನು. ಆದರೆ ಕ್ಷೌರಿಕನು ಅದನ್ನು ತೆಗೆದುಕೊಳ್ಳಲಿಲ್ಲ. ಐದು ರೂಪಾಯಿ ಕೊಟ್ಟ. ಅವನು ಅದನ್ನೂ ನಿರಾಕರಿಸಿದನು. ಜಯಪಾಲನಿಗೆ ಸಿಟ್ಟುಬಂತು. "ನಿನಗೆ ಕಾಸೇ ಕೊಡುವುದಿಲ್ಲ. ನಿನ್ನಿಷ್ಟಬಂದವರ ಹತ್ತಿರ ಹೇಳಿಕೋ ಹೋಗು" ಎಂದ ಬೇಸರದಿಂದ.

ಬೆಸ್ತ, ಕಿವಿಯಿಲ್ಲದವನು, ಸ್ತ್ರೀ ಮತ್ತು ನಾಯಿಂದ—ಈ ನಾಲ್ವರೂ ರಾಜನಬಳಿಗೆ ಹೋಗಿ ಜಯಪಾಲನಮೇಲೆ ಫಿರ್ಯಾದು ಹೂಡಿದರು. ರಾಜನು ಜಯಪಾಲನನ್ನು ಕರೆಯಿಸಿದನು. ವಿಚಾರಣೆ ನಡೆಯಿತು.

ಮೊದಲು ಮೀನು ಹಿಡಿಯುವವನು ರಾಜನೊಂದಿಗೆ "ಮಹಾಸ್ವಾಮಿ, ಸಮುದ್ರತೀರ





ದಲ್ಲಿ ನಮ್ಮ ತಂದೆ ಕೊಕ್ಕರೆಯ ರೂಪ ಪಡೆದು ಮೀನು ಹಿಡಿಯಲು ನನಗೆ ಸಹಾಯಮಾಡು ತ್ತಿರಲು, ಈತನು ತನ್ನ ಬಾಣದಿಂದ ಕೊಕ್ಕರೆ ಯನ್ನು ಕೊಂದು ನನಗೆ ಹೇಳಲಸದಳವಾದ ನಷ್ಟಮಾಡಿರುತ್ತಾನೆ" ಎಂದನು.

ರಾಜನು ಜಯಪಾಲನಕಡೆ ನೋಡಿ "ಈ ಬೆಸ್ತನಿಗೆ ಪರಿಹಾರ ರೂಪವಾಗಿ ನಿನ್ನ ನೌಕೆಗಳಲ್ಲಿ ಒಂದನ್ನು ಕೊಡು" ಎಂದನು.

ತರುವಾಯ ಕಿವಿಯಿಲ್ಲದವನು ಹೀಗೆಂದ: "ಮಹಾಪ್ರಭು, ಈತನ ತಂದೆಯಬಳಿ ನನ್ನ ಬಲಗಿವಿಯನ್ನು ಅಡವಿಟ್ಟು ಹತ್ತು ರೂಪಾಯಿ ಪಡೆದಿದ್ದೆ. ಆ ಹಣವನ್ನು ಬಡ್ಡೀಸಮೇತ ಕೊಡಲು ಸಿದ್ಧನಿದ್ದೇನೆ. ನನ್ನ ಕಿವಿ ನನಗೆ ಕೊಡಿಸಿಕೊಡಿ ಎಂದು ಕೇಳಿದರೆ, ಈತನು ತನಗೆ ಗೊತ್ತಿಲ್ಲ, ನಿನ್ನಿಷ್ಟಬಂದವರೊಂದಿಗೆ ಹೇಳಿಕೋ ಹೋಗು ಎಂದು ರೇಗಿಬಿದ್ದನು."

ರಾಜನು ಜಯಪಾಲನು ಕಿವಿಯಿಲ್ಲದವ ನಿಗೆ ಒಂದು ನೌಕೆಯನ್ನು ಪರಿಹಾರದ್ರವ್ಯ ವಾಗಿ ಕೊಡಬೇಕೆಂದು ತೀರ್ಪಿತ್ತನು.

ತರುವಾಯ ಸ್ತ್ರೀ ಜಯಪಾಲನಮೇಲೆ ಫಿರ್ಯಾದು ಹೂಡಿದಳು. ಜಯಪಾಲನು ಆಕೆಗೊಂದು ನೌಕೆಯನ್ನು ಕೊಡಬೇಕೆಂದು ರಾಜನು ಹೇಳಿದನು.

ಕಡೆಯಲ್ಲಿ ನಾಯಿಂದನ ಸರದಿ ಬಂತು. ಅವನು "ಮಹಾರಾಜ, ಈತನು ನನ್ನಿಂದ ಕ್ಷೌರಮಾಡಿಸಿಕೊಂಡು ನನ್ನನ್ನು ಸಂತೋಷ ಪಡಿಸುವುದಾಗಿ ಹೇಳಿದನು. ಅವರ ನೌಕೆ ಯೊಂದನ್ನು ನನಗೆ ಕೊಡಿಸಿಕೊಟ್ಟರೆ ನಾನು ಸಂತುಷ್ಟನಾಗುತ್ತೇನೆ! ಅದಕ್ಕಿಂತಲೂ ಕಡಿಮೆ ಏನು ಕೊಟ್ಟರೂ ನಾನು ಸಂತೋಷಪಡ ಲಾರೆ" ಎಂದನು.

"ನಾಯಿಂದನು ಹೇಳುವುದು ಸಮಂಜಸ ವಾಗಿದೆ. ಆದುದರಿಂದ ಜಯಪಾಲನು ಅವನಿ ಗೊಂದು ನೌಕೆಯನ್ನು ಕೊಡಲಿ" ಎಂದು ರಾಜನು ನ್ಯಾಯನುಡಿದನು.

ಈ ಫಿರ್ಯಾದುಗಳನ್ನೂ, ನ್ಯಾಯಗ ಳನ್ನೂ ಕೇಳಿ ಜಯಪಾಲನು ದಿಗ್ಮೂಢ ನಾದನು. ಈ ನಗರಕ್ಕೆ ವಂಚಕ ಮಹಾ ಪಟ್ಟಣವೆಂದು ಏಕೆ ಕರೆಯುವರೋ, ಅಲ್ಲಿ ಗೇಕೆ ಹೋಗಬೇಡವೆಂದು ತನ್ನ ತಂದೆ ಹೇಳಿ ದನೋ ಜಯಪಾಲನಿಗೆ ಈಗ ತಿಳಿಯಿತು.

ಅವನ ಕೊರಳಲ್ಲಿದ್ದ ರತ್ನಹಾರಹೊರತು ಮತ್ತೆಲ್ಲಾ ಕಳೆದುಕೊಂಡಿರುವನು. ಈ ಸ್ಥಿತಿಯಿಂದ ಪಾರಾಗಲು ಮಾರ್ಗವೇನೆಂದು ಯೋಚಿಸುತ್ತಿರಲು ಹತ್ತುವರ್ಷದ ರಾಜಕುಮಾರನು ಓಡುತ್ತಾ ಸಭೆಗೆ ಬಂದನು.

ಕೂಡಲೇ ಜಯಪಾಲನು ತನ್ನ ಕೊರಳಲ್ಲಿದ್ದ ರತ್ನಹಾರವನ್ನು ತೆಗೆದು ರಾಜಕುಮಾರನ ಕೊರಳಿಗೆ ಹಾಕಿದನು. ಸಭಿಕರೆಲ್ಲ ಆನಂದದಿಂದ ಕೈಚಪ್ಪಾಳೆ ತಟ್ಟಿದರು. ರಾಜನು ತನ್ನ ಮಗನನ್ನು ಹತ್ತಿರಕ್ಕೆ ಕರೆದು, ಅವನ ಕೊರಳಲ್ಲಿದ್ದ ರತ್ನಹಾರವನ್ನು ಪರೀಕ್ಷಿಸಿ ತುಂಬಾ ಮೆಚ್ಚಿಕೊಂಡನು.

ಆಗ ಜಯಪಾಲನು ಸಭೆಯನ್ನು ಉದ್ದೇಶಿಸಿ "ನಾನು ರಾಜಕುಮಾರನಿಗೆ ರತ್ನಹಾರವನ್ನು ಒಪ್ಪಿಸಿದುದನ್ನು ಕಂಡು ಯಾರಾದರೂ ಸಂತೋಷಪಡದೇ ಇರುವವರು ಇಲ್ಲಿ ಇರುವರೊ?" ಎಂದು ಕೇಳಿದನು.

"ಇಲ್ಲ, ಇಲ್ಲ ಎಲ್ಲರಿಗೂ ಮಹದಾನಂದವಾಗಿದೆ" ಎಂದರು ಸಭಿಕರು.

ಆಗ ಜಯಪಾಲನು ನಾಯಿಂದನಕಡೆ ತಿರುಗಿ "ಏನಯ್ಯಾ, ವಿಷಯವೇನು? ನೀನೂ ಸಂತೋಷಪಟ್ಟೆಯಷ್ಟೇ?" ಎಂದನು.

ಹರ್ಷಿತನಾದೆನೆಂದು ನಾಯಿಂದನು ಹೇಳದೆ ವಿಧಿಯಿರಲಿಲ್ಲ.

ಜಯಪಾಲನು ರಾಜನೊಂದಿಗೆ "ಮಹಾಪ್ರಭು, ನಾಯಿಂದನನ್ನು ಈಗ ಸಂತೋಷಗೊಳಿಸಿದೆ. ಆದುದರಿಂದ ನಾನು ಇನ್ನುಮೇಲೆ



ಅವನಿಗೊಂದು ಹಡಗನ್ನು ಕೊಡಲಗತ್ಯವಿಲ್ಲವೆಂದು ಭಾವಿಸುವೆನು" ಎಂದ.

"ಹೌದು, ಅಗತ್ಯವಿಲ್ಲ" ಎಂದ ರಾಜ.

ತರುವಾಯ ಜಯಪಾಲನು ಸ್ತ್ರೀಯನ್ನು ಕುರಿತು "ಅಮ್ಮಾ, ನಿಮ್ಮ ಜೀವನಾಂಶದ ವಿಷಯ ಕುರಿತು ಒಂದು ವಿಷಯ ಹೇಳುವುದಿದೆ. ನಿಮ್ಮ ಕೋರಿಕೆಯಂತೆ ಜೀವನಾಂಶವನ್ನು ಕೊಡುತ್ತೇನೆ. ಆದರೆ ಒಂದು ಆತಂಕವಿದೆ. ನಮ್ಮ ಕುಲಾಚಾರ, ದೇಶಾಚಾರದ ಪ್ರಕಾರ ಸತಿ ಪತಿಯೊಂದಿಗೆ ಸಹಗಮನಮಾಡಬೇಕು. ದುರದೃಷ್ಟವಶಾತ್ ನಮ್ಮ ತಂದೆಯವರು ತೀರಿಕೊಂಡು ಒಂದು ವರ್ಷವಾಯಿತು. ಆದುದರಿಂದ ನೀವು ಈಗಲಾದರು ಚಿತೆಯನ್ನು ಏರಿಸಿ ಪ್ರಾಣತ್ಯಾಗಮಾಡಿಬಿಡಿ.

ಹಣವನ್ನು ನಿಮ್ಮ ವಾರಸುದಾರರಿಗೆ ಕೊಡಲು ನನ್ನ ಅಭ್ಯಂತರವೇನಿಲ್ಲ" ಎಂದನು.

"ನಾನು ಬಲವಂತದಿಂದ ಪ್ರಾಣಕಳೆದುಕೊಳ್ಳಲಾರೆ" ಎಂದಳು ಆಕೆ. ಜಯಪಾಲನು ರಾಜನೊಂದಿಗೆ "ನಾನು ಈಕೆಗೆ ಒಂದು ನೌಕೆಯನ್ನು ಏಕೆ ಕೊಡಬೇಕು? ಅದರ ಪ್ರಶ್ನೆಯೇ ಏಳುವುದಿಲ್ಲವಲ್ಲಾ" ಎಂದನು. ರಾಜನು ಜಯಪಾಲನ ಮಾತನ್ನು ಸರಿಯೆಂದು ಎತ್ತಿಹಿಡಿದನು.

ತರುವಾಯ ಕಿವಿಯಿಲ್ಲದವನೊಂದಿಗೆ "ಅಯ್ಯಾ, ನಿನ್ನ ಕಿವಿಯನ್ನು ನಿನಗೆ ಒಪ್ಪಿಸಲು ನನ್ನ ಅಭ್ಯಂತರವೇನಿಲ್ಲ. ಆದರೆ ನಮ್ಮ ತಂದೆಯಬಳಿ ಅನೇಕರು ತಮ್ಮ ಕಿವಿಗಳನ್ನು ಅಡವಿಟ್ಟಿರುವರು. ಆ ರಾಶಿಯಲ್ಲಿ ನಿನ್ನ ಕಿವಿಯನ್ನು ಹುಡುಕುವುದು ಕಷ್ಟ. ಆದುದರಿಂದ ನಿನ್ನ ಎಡಗಿವಿಯನ್ನು ಕೊಟ್ಟರೆ ಅದರ ಜೊತೆ ನೋಡಿ ಕೊಡುತ್ತೇನೆ. ನೀನು ನಿನ್ನ ಎಡಕಿವಿಯನ್ನು ಕತ್ತರಿಸಿಕೊಡು" ಎಂದು ಕೇಳಿದನು. ಈ ವ್ಯವಸ್ಥೆಗೆ ಕಿವಿಯಿಲ್ಲದವನು ಒಪ್ಪಲಿಲ್ಲ.

ಅವನಿಗೆ ಪರಿಹಾರದ್ರವ್ಯ ಕೊಡಬೇಕಾಗಿಲ್ಲವೆಂದು ರಾಜನು ಹೇಳಿಬಿಟ್ಟನು. ತರುವಾಯ ಜಯಪಾಲನು ರಾಜನೊಂದಿಗೆ "ಮಹಾಪ್ರಭು, ನಮ್ಮ ತಂದೆ ತೀರಿಕೊಂಡನಂತರ ಮತ್ಸ್ಯರೂಪವನ್ನು ತಾಳಿ ನನಗೆ ನೌಕೆ ನಡೆಯಿಸುವ ವಿಷಯದಲ್ಲಿ ತರಬೇತು ಕೊಡುತ್ತಿದ್ದರು. ಈ ಬೆಸ್ತನ ತಂದೆ ಕೊಕ್ಕರೆಯ ರೂಪಪಡೆದು ಅವರನ್ನು ನುಂಗಿಬಿಟ್ಟನು. ಎಂತಲೇ ನಾನು ಕೊಕ್ಕರೆಯನ್ನು ಕೊಂದೆನು. ಮೀನಿನ ರೂಪದಲ್ಲಿದ್ದ ನನ್ನ ತಂದೆ ಜೀವಿಸಿದ್ದರೆ ನಾನು ಈ ತೀರದಬಳಿಗೆ ಬರುವ ಪ್ರಸಂಗವೇ ಬರುತ್ತಿರಲಿಲ್ಲ" ಎಂದನು. ರಾಜನು ಅವನ ವಾದವನ್ನು ಕೇಳಿ ಸಂತೋಷಗೊಂಡು ಮೀನು ಹಿಡಿಯುವವನಿಗೂ ಸಹ ಪರಿಹಾರ ಕೊಡಲಗತ್ಯವಿಲ್ಲವೆಂದು ತೀರ್ಪುಕೊಟ್ಟನು. ತರುವಾಯ ಜಯಪಾಲನು ರಾಜನ ಅತಿಥಿಯಾಗಿ ಒಂದುದಿನವಿದ್ದು, ಅರಸನಿಂದ ಅನೇಕ ಬಹುಮಾನಗಳನ್ನು ಪಡೆದು, ತನ್ನ ನೌಕೆಗಳೊಂದಿಗೆ ಸಿಂಹಳ ದ್ವೀಪವನ್ನು ಸೇರಿಕೊಂಡನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. 10

1958 ಸೆಪ್ಟಂಬರು ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟು ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಜೂಲೈ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು - 26.**

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ತಲೆಹುಗಿದು ನಮಸ್ಕಾರ!

ಎರಡನೇ ಫೋಟೋ: ನೆಲನೆಗೆದು ಚಮತ್ಕಾರ!!

ಕಳಿಸಿದವರು: ಎಂ. ಕೆ. ಶೆಣೈ,

197, ಫರ್ಗುಸನ್ ರೋಡು, ಬೊಂಬಾಯಿ–13.

**ಬಹುಮಾನ ರೂ. 10/-ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**

# ಆಸ್ಟ್ರೇಲಿಯಾ ನವಿಲು : ಅವುಗಳ ಪ್ರಕೃತಿ

ಹೆಣ್ಣು ಆಸ್ಟ್ರೇಲಿಯಾ ನವಿಲು, ಜೂನ್ ಜೂಲೈ ತಿಂಗಳಲ್ಲಿ, ಇನ್ನೂ ನಿಧಾನವಾಗಿಕೂಡಾ ಒಂದೇ ಒಂದು ಮೊಟ್ಟೆ ಇಡುತ್ತದೆ. ಮೊಟ್ಟೆಯ ಭಾರ ಸುಮಾರು ೨ ಔನ್ಸು ಅಥವಾ ೫ ತೊಲೆಗಳು. ತನ್ನ ಶರೀರದ ಮೆತ್ತಗಿನ ಗರಿಗಳನ್ನು ಕೆಳಗೆ ಹಾಕಿ ಅದರಮೇಲೆ ಮೊಟ್ಟೆ ಇಡುತ್ತದೆ.

ನಡು ಚಳಿಗಾಲದಲ್ಲಿ, ಮಂಜು ಬೀಳುವಾಗ ಮೊಟ್ಟೆ ಒಡೆಯುತ್ತದೆ. ಮರಿಗೆ ಬೆಚ್ಚಗಿರಲಿಕ್ಕಾಗಿ ಹೆಣ್ಣುಹಕ್ಕಿ ಅನೇಕ ದಿನಗಳವರೆಗೆ ಗೂಡನ್ನೆ ಅಂಟಿಕೊಂಡು ಕುಳಿತಿರುತ್ತದೆ. ಒಂದು ವಾರದಮೇಲೆ ಆಚೀಚೆಗೆ ಹೋಗಿ ಮರಿಗೆ ಬೇಕಾದ ಆಹಾರವನ್ನು ಕಷ್ಟಪಟ್ಟು ತರುತ್ತದೆ.

ಐದಾರು ವಾರಗಳವರೆಗೂ ಮರಿ ಗೂಡುಬಿಟ್ಟು ಹೊರಗೆ ಬಾರದು. ಆಗ ಮರಿ ಹಾಕುವ ಹಿಚಿಕೆಗಳನ್ನು ತಾಯಿಹಕ್ಕಿ ತನ್ನ ಕೊಕ್ಕಿನಿಂದೆತ್ತಿಕೊಂಡು ನದಿಯ ಪ್ರವಾಹದಲ್ಲಿ ಹಾಕಿಬಿಡುತ್ತದೆ. ಹೀಗೆ ಮಾಡುವುದರಿಂದ 'ಶತ್ರುಗಳಿಗೆ' ಗೂಡಿನ ವಾಸನೆ ಬರುವುದಿಲ್ಲ.

ಸೆಪ್ಟೆಂಬರಿನಲ್ಲಿ ಮರಿ ಗೂಡುಬಿಟ್ಟು ಪ್ರಪಂಚದಲ್ಲಿ ಅಡಿಯಿಡುತ್ತದೆ. ಅನಂತರ ಒಂದು ವಾರದವರೆಗೂ ತಾಯಿಹಕ್ಕಿ ಮರಿಯ ಜತೆಯಲ್ಲೇ ಇದ್ದು, ಅದನ್ನು ಹುಲ್ಲುಮರೆಯಲ್ಲೋ, ಮರಗಳೆಡೆಯಲ್ಲಿಯೋ ಅಡಗಿಸುತ್ತ ತಾನೇ ಅದಕ್ಕೆ ಆಹಾರ ತಂದುಕೊಡುತ್ತದೆ. ಮರಿಗಳಿಗೆ ಹತ್ತು ತಿಂಗಳು ತುಂಬಿದಾಗಲೂ ತಾಯಿಹಕ್ಕಿ ಆಗಾಗ ಬಂದು ಅವುಗಳಿಗೆ ಆಹಾರ ಕೊಡುವುದನ್ನು ನೋಡಿದವರಿದ್ದಾರೆ.



ಹೆಣ್ಣು ಹಕ್ಕಿಯ ಬಾಲ ಚಿಕ್ಕದಾಗಿರುತ್ತದೆ. ಇವುತಮ್ಮ ಪಿಂಛವನ್ನು ಬಿಡಿಸಿ ಹಾಡುವುದೂ ಆಡುವುದೂ ಉಂಟು. ಸೆಪ್ಟೆಂಬರಿನಲ್ಲಿ ಗಂಡುಹಕ್ಕಿಯ ಪಿಂಛವು ಉದುರುತ್ತದೆ; ಮತ್ತೊಂದು ತಿಂಗಳಿನೊಳಗೆ ಹೊಸ ಪಿಂಛವು ಹೊರಡುತ್ತದೆ. ಬಾಲವಿಲ್ಲದ ಕಾಲದಲ್ಲಿ ಈ ಪಕ್ಷಿ ಆಗಾಗ ಹಾರುತ್ತದೆ.

ಈ ಹಕ್ಕಿಗಳು 'ಅವಿಭಕ್ತ ಕುಟುಂಬ' ವಾಗಿ ಜೀವಿಸುತ್ತವೆ. ಕುಟುಂಬಕ್ಕೆ ಕುಟುಂಬವೇ ಆಹಾರ ಹುಡುಕುತ್ತಾ ಹೊರಡುತ್ತವೆ. ಆರು ವರ್ಷ ಪ್ರಾಯದ ಪಕ್ಷಿಗಳೂ ಆ ಗುಂಪಿನಲ್ಲಿರುತ್ತವೆ. ಅವುಗಳಲ್ಲಿ ಒಂದು ತಾಯಿ, ಉಳಿದುವು ಅದರ ಮಕ್ಕಳು. ತಂದೆಹಕ್ಕಿ ತನ್ನ ಕುಟುಂಬಕ್ಕೆ ಸಮೀಪದಲ್ಲೇ ಇರುತ್ತದೆ. ಅದು ನಡುನಡುವೆ ಮೇವನ್ನು ಬಿಟ್ಟು ಗರ್ವದಿಂದ ತನ್ನ ಹೆಂಡತಿ ಮಕ್ಕಳ ಸಮೀಪ ಬಂದು, ಅವುಗಳನ್ನು ನೋಡಿ ಆನಂದಿಸಿ, ಮತ್ತೆ ಮೇವು ಸಾಗಿಸುತ್ತದೆ! ಈ ಪಕ್ಷಿಗಳಿಗೆ ಆರೇಳು ವರ್ಷ ತುಂಬುವವರೆಗೂ ಗಂಡೂ ಹೆಣ್ಣೂ ಒಂದೇ ರೀತಿ ಕಾಣಿಸುತ್ತವೆ. ಪಿಂಛ ಬಂದಾಗ ವ್ಯತ್ಯಾಸವು ಸ್ಪಷ್ಟವಾಗಿ ಕಾಣಿಸುತ್ತದೆ. ಪಿಂಛ ಬರಲು ಪ್ರಾರಂಭವಾಗಿ, ಪೂರ್ಣಬರಲು ಒಂದು ವರ್ಷಕಾಲ ಬೇಕು.

ಈ ಪಕ್ಷಿಗಳಲ್ಲಿ ಸ್ನೇಹಭಾವ ಬಹಳ. ಕೆಲವು ಪಕ್ಷಿಗಳು ವರ್ಷಗಟ್ಟಲೆ ಸ್ನೇಹವಾಗಿರುತ್ತವೆ. ಒಂದೊಂದರ ಕುಟುಂಬವು ಏರ್ಪಟ್ಟಮೇಲೆ, ಒಂದು ಕುಟುಂಬದ ದಿಬ್ಬವನ್ನು ನೋಡಲು ಇನ್ನೊಂದು ಕುಟುಂಬವು ಹೋಗುತ್ತದೆ. ಸ್ನೇಹಿತರು ಕೂಡಿಕೊಂಡಾಗ ಆಟ ಓಟಗಳೂ ಸಾಗುತ್ತವೆ. ಐದು ಹಕ್ಕಿಗಳುಕೂಡಾ ಆಡುವುದನ್ನು ಕಂಡವರಿದ್ದಾರೆ.

ಈ ಪಕ್ಷಿಗಳು ಎಷ್ಟು ಕಾಲ ಬದುಕುತ್ತವೆಂದು ಸ್ಪಷ್ಟವಾಗಿ ತಿಳಿಯದಿದ್ದರೂ, ಮನುಷ್ಯರೊಂದಿಗೆ ಸ್ನೇಹವಾಗಿದ್ದ "ಟಿಮೊತಿ" ಎಂಬ ನವಿಲು ೨೫ ವರ್ಷ ಬದುಕಿತು.



# ಚಿತ್ರ ಕಥೆ





ಒಂದು ದಿನ ವಾಸು ಮತ್ತು ಗೋಪಿಯರು ತಮ್ಮ 'ಟೈಗರಿ'ನೊಂದಿಗೆ ಸ್ನಾನ ಮಾಡಲು ಕಾಲುವೆಯಬಳಿಗೆ ಹೋದರು. ಅಲ್ಲೊಬ್ಬ ದೊಡ್ಡಹುಡುಗ ಅಡ್ಡಬಂದು "ಕಾಲುವೆಯಲ್ಲಿ ಮೊಸಳೆಯಿದೆ. ಎರಡಾಣೆ ಕೊಡಿ. ನಾನಾ ಮೊಸಳೆಯನ್ನು ಎತ್ತಿಕೊಂಡು ಹೋಗುತ್ತೇನೆ. ಮತ್ತೆ ನಿಮಗೆ ನಿರ್ಭಯವಾಗಿ ಸ್ನಾನಮಾಡಬಹುದು" ಎಂದ. ಇಷ್ಟರಲ್ಲಿ 'ಟೈಗರ್' ಆಚೆಗೆ ಹೋಗಿ ಅಲ್ಲಿದ್ದ ಮೊಸಳೆಯನ್ನು ಕಚ್ಚಿ ಎತ್ತಿಕೊಂಡು ಓಡತೊಡಗಿತು. "ಅಯ್ಯೊ! ನನ್ನ ಎಂಟಾಣೆಯ ರಬ್ಬರ್‌ಮೊಸಳೆ ನಾಯಿ ಎತ್ತಿಕೊಂಡು ಹೋಯ್ತೊ!" ಎಂದು ಕೂಗಿದ. ವಾಸು ಗೋಪಿಯರು ಗಹಗಹಿಸಿ ನಗುತ್ತಾ ಹಾಯಾಗಿ ಸ್ನಾನಮಾಡಿದರು.






Printed by B. NAGI REDDI at the B. N. K. Press Private Ltd., and Published by him for Chandamama Publications, from Madras 26.—Controlling Editor: SRI 'CHAKRAPANI'

## ನಿಮ್ಮ ಬಟ್ಟೆಗಳಿಗೆ ಅತ್ಯುತ್ತಮ ಸಾಬೂನೇ ಬೇಕು—

## ಅದೆಂದರೆ ತಾತಾರವರ 501 ಸ್ಪೆಷಲ್ ಸಾಬೂನು

ತಾತಾರವರ 501 ಸ್ಪೆಷಲ್ ಸಾಬೂನನ್ನು ಉಪಯೋಗಿಸಿ ನಿಮ್ಮ ಬಟ್ಟೆಗಳಿಗೆ ವಿಶೇಷ ರಕ್ಷಣೆಯನ್ನು ಕೊಡಿರಿ! ಬಟ್ಟೆಗಳನ್ನು ಶುಭ್ರವಾಗಿ, ಹೊಳೆಯುವಂತೆ ಮಾಡುವ ಈ ಸಾಬೂನಿನಿಂದ ಎಂತಹ ನಾಜೂಕು ಬಟ್ಟೆಗಳನ್ನಾದರೂ ಒಗೆಯಬಹುದು. ಯಾವಾಗಲೂ ತಾತಾರವರ 501 ಸ್ಪೆಷಲ್ ಸಾಬೂನನ್ನು ಉಪಯೋಗಿಸಿರಿ!




ಹೊಸ ಹಳದಿ ಮತ್ತು ಕೆಂಪು ಬಣ್ಣದ ಹೊದಿಕೆ ಇರುವುದನ್ನು ನೋಡಿ ಕೊಂಡುಕೊಳ್ಳಿರಿ

ತಾತಾ ಆಯಿಲ್ ಮಿಲ್ಸ್ ಕಂಪೆನಿ ಲಿಮಿಟೆಡ್

**ದಿ ತಾತಾ ಆಯಿಲ್ ಮಿಲ್ಸ್ ಕಂಪೆನಿ, ಲಿಮಿಟೆಡ್**

ಸೇಲ್ಸ್ ಆಫೀಸ್: 2, ಮಹಾತ್ಮಾ ಗಾಂಧೀ ರೋಡ್, ಬೆಂಗಳೂರು-1.











MANNERS
GRIPE MIXTURE
MANNERS






Photo by P. R. Shinde



ಬಹುಮಾನ
ಪಡೆದ ಶೀರ್ಷಿಕೆ

ನೆಲ ನೆಗೆದು ಚಮತ್ಕಾರ !!

ಕಳಿಸಿದವರು :
ಎಂ. ಕೆ. ಶೆಣೈ




ರೂಪಧರನ ಯಾತ್ರೆಗಳು - ೧೨